# ಸರ್ವಜ್ಞನ ವಚನಗಳ ಸಾಮಾಜಿಕ ವಿಶ್ಲೇಷಣೆ

ಈ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ (ಕನ್ನಡ) ಪದವಿಗಾಗಿ ಅರ್ಪಿಸಲಾಗಿದೆ


ಸಂಶೋಧಕ

ನಾಗೇಶ್.ಸಿ.ಎಸ್.

ನೋಂದಣಿ ಸಂಖ್ಯೆ KRSMKS-00೩೬೩

ಮಾರ್ಗದರ್ಶಕರು

ಡಾ. ಎ.ಆರ್. ಮದನ್ ಕುಮಾರ್, ಎಂ.ಎ. ಪಿಎಚ್.ಡಿ.





ಕರ್ನಾಟಕ ಸಂಘ (ರಿ), ಮಂಡ್ಯ

ಎಂ.ಎಲ್. ಶ್ರೀಕಂಠೇಶ್ವರಗೌಡ ಸಂಶೋಧನಾ ಕೇಂದ್ರ

(ಕನ್ನಡ ವಿ.ವಿ.ಹಂಪಿಯಿಂದ ಮಾನ್ಯತೆ ಪಡೆದಿದೆ)

ಮಂಡ್ಯ

೨೦೦೮-೦೯

# ಸರ್ವಜ್ಞನ ವಚನಗಳ ಸಾಮಾಜಿಕ ವಿಶ್ಲೇಷಣೆ

ಈ ನಿಬಂಧವನ್ನು ಕನ್ನಡ ವಿಶ್ವವಿದ್ಯಾನಿಲಯಕ್ಕೆ ಎಂ.ಫಿಲ್.(ಕನ್ನಡ) ಪದವಿಗಾಗಿ ಅರ್ಪಿಸಲಾಗಿದೆ




ಸಂಶೋಧಕ

**ನಾಗೇಶ್.ಸಿ.ಎಸ್.**

ನೋಂದಣಿ ಸಂಖ್ಯೆ KRSMKS-00೩೬೩

ಮಾರ್ಗದರ್ಶಕರು

**ಡಾ. ಎ.ಆರ್. ಮದನ್ ಕುಮಾರ್,** ಎಂ.ಎ., ಪಿ.ಹೆಚ್‌ಡಿ.





**ಕರ್ನಾಟಕ ಸಂಘ (ರಿ), ಮಂಡ್ಯ**

ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ

(ಕನ್ನಡ ವಿ.ವಿ.ಹಂಪಿಯಿಂದ ಮಾನ್ಯತೆ ಪಡೆದಿದೆ)

ಮಂಡ್ಯ

೨೦೦೮-೦೯

# ಪ್ರಮಾಣ ಪತ್ರ

"ಸರ್ವಜ್ಞನ ವಚನಗಳ ಸಾಮಾಜಿಕ ವಿಶ್ಲೇಷಣೆ" ಎಂಬ ವಿಷಯದ ಮೇಲೆ ಈ ನಿಬಂಧವನ್ನು **ಡಾ.ಎ.ಆರ್.ಮದನ್‌ಕುಮಾರ್** ರವರ ಮಾರ್ಗದರ್ಶನದಲ್ಲಿ ನನ್ನ ಸಂಶೋಧನೆಯ ಫಲವಾಗಿ ರಚಿಸಲ್ಪಟ್ಟು ಕನ್ನಡ ವಿಶ್ವವಿದ್ಯಾನಿಲಯದ **ಎಂ.ಫಿಲ್. (ಕನ್ನಡ)** ಪದವಿಗೆ ಅರ್ಪಿಸುತ್ತಿದ್ದೇನೆ.

ಈ ನಿಬಂಧವನ್ನು ಹಿಂದಿನ ವರ್ಷಗಳಲ್ಲಿ ಯಾರೂ ಇಲ್ಲಿಯವರೆಗೆ ಯಾವುದೇ ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸಿಲ್ಲವೆಂದು ನಾನು ಇಲ್ಲಿ ಪ್ರಮಾಣೀಕರಿಸುತ್ತಿದ್ದೇನೆ.

Nagesh. C.S.

**ನಾಗೇಶ್.ಸಿ.ಎಸ್.**

**ದಿನಾಂಕ : ೩೦.೦೯.೨೦೦೯** **ಎಂ.ಫಿಲ್. ವಿದ್ಯಾರ್ಥಿ**

**ಸ್ಥಳ : ಮಂಡ್ಯ** **ನೋಂದಣಿ ಸಂಖ್ಯೆ:** KRSMKS-00೩೭೩

# ದೃಢೀಕರಣ ಪತ್ರ

"ಸರ್ವಜ್ಞನ ವಚನಗಳ ಸಾಮಾಜಿಕ ವಿಶ್ಲೇಷಣೆ" ಎಂಬ ವಿಷಯದ ಮೇಲೆ ಈ ನಿಬಂಧವನ್ನು ಕನ್ನಡ ವಿಶ್ವವಿದ್ಯಾನಿಲಯದ ಎಂ.ಫಿಲ್. (ಕನ್ನಡ) ಪದವಿಗೆ ವಿದ್ಯಾರ್ಥಿಯಾದ **ನಾಗೇಶ್.ಸಿ.ಎಸ್.**ರವರು ನನ್ನ ಮಾರ್ಗದರ್ಶನ ಹಾಗೂ ಮೇಲ್ವಿಚಾರಣೆಯಲ್ಲಿ ಬರೆದು ಒಪ್ಪಿಸುತ್ತಿದ್ದಾರೆಂದೂ ಹಾಗೂ ಈ ವಿಷಯದ ಬಗ್ಗೆ ಬೇರೆ ಯಾರಿಗೂ ನಾನು ಮಾರ್ಗದರ್ಶನ ಮಾಡಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಮಾರ್ಗದರ್ಶಕರ ಸಹಿ.

ಅ.ಮದನ್‌ಕುಮಾರ್

(ಡಾ.ಎ.ಆರ್.ಮದನ್‌ಕುಮಾರ್)

ಪ್ರಾಧ್ಯಾಪಕರು, ಕನ್ನಡ ವಿಭಾಗ

ಮಹಿಳಾ ಸರ್ಕಾರಿ ಪದವಿ ಕಾಲೇಜು, ಮಂಡ್ಯ

ದಿನಾಂಕ : ೨೦-೦೬-೨೦೦೬

ಸ್ಥಳ : ಮಂಡ್ಯ.

# ಸರ್ವಜ್ಞನ ವಚನಗಳ ಸಾಮಾಜಿಕ ವಿಶ್ಲೇಷಣೆ

## ಪರಿವಿಡಿ

# ಅಧ್ಯಾಯ ೧

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಎರಡು ಸಾವಿರ ವರ್ಷಗಳಿಗೂ ಮಿಗಿಲಾದ ಇತಿಹಾಸವುಳ್ಳ ಕನ್ನಡ ಸಾಹಿತ್ಯವು ಭಾರತೀಯ ಸಾಹಿತ್ಯ ಸಂದರ್ಭದಲ್ಲಿ ತನ್ನದೇ ಆದ ನೆಲೆ ಬೆಲೆ ವೈಶಿಷ್ಟ್ಯಗಳೊಡನೆ ಮುನ್ನಡೆದಿರುವುದು ಸರ್ವವಿದಿತ. ಪೂರ್ವದ ಹಳಗನ್ನಡ, ಹಳಗನ್ನಡ, ನಡುಗನ್ನಡ, ಹೊಸಗನ್ನಡ ಎಂಬ ನಾಲ್ಕು ಘಟ್ಟಗಳಲ್ಲಿ ಸಾಗಿರುವ ಕನ್ನಡ ಸಾಹಿತ್ಯದ ಕೃಷಿ ತುಂಬಾ ಹುಲುಸಾದುದಾಗಿದೆ. ಈ ನಾಲ್ಕು ಘಟ್ಟಗಳಲ್ಲಿ ಹುಟ್ಟು ಕಂಡ ಜೈನ ಸಾಹಿತ್ಯ, ವಚನ ಸಾಹಿತ್ಯ, ದಾಸ ಸಾಹಿತ್ಯ, ಜನಪದ ಸಾಹಿತ್ಯಗಳ ಕೊಡುಗೆ ಅಪಾರ, ಅನನ್ಯ. ಈ ಒಂದೊಂದೂ ಪ್ರಕಾರವೂ ತನ್ನದೇ ಆದ ರೀತಿಯಲ್ಲಿ ವಿಶಿಷ್ಟವೂ, ವೈವಿಧ್ಯಮಯವೂ ಆಗಿದ್ದು ತಮ್ಮ ತಮ್ಮ ಕಾಲದ ಸಾಮಾಜಿಕ ಸಂದರ್ಭಗಳಿಗೆ ತಕ್ಕಂತೆ ಸ್ಪಂದಿಸಿರುವುದನ್ನು ನಾವು ಮನಗಾಣಬಹುದಾಗಿದೆ.

ಹನ್ನೆರಡನೆಯ ಶತಮಾನದ ವಚನ ಸಾಹಿತ್ಯವಂತೂ ಇಡೀ ವಿಶ್ವಸಾಹಿತ್ಯಕ್ಕೆ ಕನ್ನಡ ಸಾಹಿತ್ಯವು ನೀಡಿರುವ ಕೊಡುಗೆಯಾಗಿದೆ. ಸಾರ್ವಕಾಲಿಕವೂ, ಸರ್ವಜನಾದರಣೀಯವೂ, ವಿಶ್ವಮಾನ್ಯವೂ ಆದ ವಿಚಾರಗಳನ್ನು ಬಿತ್ತರಿಸಿದ ಈ ವಚನ ಸಾಹಿತ್ಯ ಇಡೀ ವಿಶ್ವಸಾಹಿತ್ಯ ಸಂದರ್ಭದಲ್ಲಿಯೇ ತುಂಬಾ ವಿಶಿಷ್ಟವೂ, ವಿಭಿನ್ನವೂ ಆದುದಾಗಿದೆ. ಅಂದಿನ ಶರಣರ ಪಾಲಿಗೆ ಈ ಲೋಕವೇ ಒಂದು ಉತ್ಸವ ಮೂರ್ತಿಯಾಗಿತ್ತು. ಅದನ್ನು ಪೂಜಿಸಿದಷ್ಟು, ಮೆರೆಯಿಸಿದಷ್ಟು, ಗೌರವಿಸಿದಷ್ಟು ಮೂಲ ಮೂರ್ತಿಯಾದ ಭಗವಂತನಿಗೆ ತೃಪ್ತಿಯಾಗುತ್ತದೆ ಎಂದು ನಂಬಿದ್ದವರು ಅವರಾಗಿದ್ದರು. ಸ್ವರ್ಗಲೋಕ ಮರ್ತ್ಯಲೋಕವೆಂಬುದು ಬರೀ ಶಬ್ದ ವ್ಯಾಮೋಹ ಅಷ್ಟೆ. ನಮ್ಮ ಕಣ್ಣ ಮುಂದೆ ರಾಚಿಕೊಂಡಿರುವ ಬದುಕೇ ಸರ್ವಸ್ವ, ಅದನ್ನು ಸಹ್ಯ ಸುಂದರವನ್ನಾಗಿ ಮಾಡಿಕೊಳ್ಳಬೇಕು ಎಂಬುದು ಅವರ ನಿಲುವಾಗಿತ್ತು. ಹಾಗಾಗಿ ಅವರು ಸಾಹಿತ್ಯವನ್ನು (ವಚನ ಸಾಹಿತ್ಯವನ್ನು) ಬರೆಯಬೇಕೆಂದು ಬರೆದವರಲ್ಲ, ಆ ಕಾರಣದಿಂದಲೇ ಅವರ ಸಾಹಿತ್ಯಕ್ಕೆ ಸಾಮಾಜಿಕ ಬದ್ಧತೆ ಇತ್ತು. ಮಾನವೀಯ ಕಾಳಜಿಯ ಸ್ಪರ್ಶವಿತ್ತು ಎನ್ನುವುದನ್ನು ನಾವು ಮರೆಯುವಂತಿಲ್ಲ. ನಿಜ ಹೇಳಬೇಕೆಂದರೆ ಅವರು ಲೋಕಕಲ್ಯಾಣದಲ್ಲಿ ಆತ್ಮಕಲ್ಯಾಣ ಬಯಸಿದ ಮಹಾನುಭಾವರು. ಅವರದು ಕೇವಲ ಅನುಭವಜನ್ಯವಾದ ಸಾಹಿತ್ಯವಲ್ಲ; ಅದು ಅನುಭಾವ ಸಾಹಿತ್ಯ.

ಪ್ರಸ್ತುತ ಈ ನಿಬಂಧದ ವಸ್ತುವಾಗಿರುವ ೧೬ನೇ ಶತಮಾನದ ಸರ್ವಜ್ಞನು ಇದೇ ವಚನಕಾರರಿಂದ ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಂಡವನು. ಅವನಿಗೆ ಅವರಂತೆಯೇ ಸಾಹಿತ್ಯ ಬರೆದು ತನ್ನ ಹೆಸರನ್ನು ಅಜರಾಮರಗೊಳಿಸಿಕೊಳ್ಳಬೇಕೆಂಬ ಯಾವುದೇ ಇಚ್ಚೆ ಇರಲಿಲ್ಲ, ಬದಲಾಗಿ ಇಹದ, ವಾಸ್ತವದ ಬದುಕನ್ನು ಸಹ್ಯ ಸುಂದರವನ್ನಾಗಿಸುವುದು ಮುಖ್ಯವಾಗಿತ್ತು. ಆ ಕಾರಣದಿಂದಲೇ ಅವನಲ್ಲಿಯೂ ವಚನಕಾರರಲ್ಲಿದ್ದಂತಹ

ಸಾಮಾಜಿಕ ಬದ್ಧತೆ, ಮಾನವೀಯ ಕಾಳಜಿ ಸ್ಪರ್ಶ (ಅವನ ವಚನಗಳಲ್ಲಿಯೂ) ಇರುವುದನ್ನು ನಾವು ಸ್ಪಷ್ಟವಾಗಿ ಗುರುತಿಸಬಹುದಾಗಿದೆ.

ಸರ್ವಜ್ಞನ ವ್ಯಕ್ತಿತ್ವದ ಬಗ್ಗೆ ನಾವು ಹೇಳಬೇಕಾದ ಅಂಶವೊಂದಿದೆ. ೧೨ನೇ ಶತಮಾನದ ಶರಣ ಚಳುವಳಿಯ ನೇತಾರನಾದ ಬಸವಣ್ಣ ಸಮಾಜದ ಉತ್ತಮ ಕುಲದಲ್ಲಿ ಹುಟ್ಟಿ, ಉನ್ನತಾಧಿಕಾರ ಹೊಂದಿ, ಇತರ ಸ್ಥಾನಮಾನಗಳನ್ನೂ ಅನುಭವಿಸಿ ಪ್ರಜ್ಞಾಪೂರ್ವಕವಾಗಿ ಕೆಳಜಾತೀಕರಣಕ್ಕೆ ಒಳಗಾದವನಾದರೆ ಸರ್ವಜ್ಞನು ಹುಟ್ಟಿನಿಂದಲೇ ಕೀಳು ಜಾತಿಯಲ್ಲಿ ಹುಟ್ಟಿ ಸಮಾಜದ ಮೇಲ್ವರ್ಗದ ದೌಷ್ಟ್ಯ ದರ್ಪಗಳನ್ನು ಕಂಡುಂಡವನು. ಹಾಗಾಗಿ ಇಡೀ ಶರಣ ಚಳುವಳಿಯ ಆಳ ಅಂತರಾಳವನ್ನೆಲ್ಲಾ ಅರಿತು ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಂಡಿದ್ದ ಅವನಿಗೆ ಜೀವನದ ಪರಮಪುರುಷಾರ್ಥಗಳ, ಮೌಲ್ಯಗಳ ಸ್ಪಷ್ಟ ಅರಿವು ಇದ್ದಿತ್ತು.

ಇವೆಲ್ಲವನ್ನೂ ಮೈಗೂಡಿಸಿಕೊಂಡಿದ್ದ ಅವನ ಕಣ್ಣಿಗೆ ಬೀಳದುದು, ಮನಸ್ಸಿಗೆ ಗೋಚರಿಸದುದು, ಹೃದಯ ತಟ್ಟದುದು ಯಾವುದೂ ಇರಲಿಲ್ಲ. ದಾರ್ಶನಿಕನಾದ ಅವನಿಗೆ ನಮ್ಮ ಭಾರತೀಯ ಸಂಸ್ಕೃತಿಯ ಪ್ರಕಾರ ಒಬ್ಬ ಮಾನವ ಪೂರ್ಣ ಮಾನವನಾಗಬೇಕಾದರೆ ಅಥವಾ "ಪರಿಪೂರ್ಣ ಮಾನವ"ನಾಗಬೇಕಾದರೆ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನು ಸಾಧಿಸಬೇಕು ಎನ್ನುವ ನಿಲುವಿನಂತೆ ಈ ಮೊದಲು ಧರ್ಮಾರ್ಥಕಾಮಗಳನ್ನು ಬಹುಶಃ ಅವನ ಮಧ್ಯವಯಸ್ಸಿನವರೆಗೆ ಅನುಭವಿಸಿದ್ದಿರಬಹುದಾದ ಸರ್ವಜ್ಞನು ಅನಂತರ ಪ್ರಜ್ಞಾಪೂರ್ವಕವಾಗಿ ಮೋಕ್ಷಪಥಕ್ಕೆ ಕಾಲಿಟ್ಟವನಾಗಿರುವುದನ್ನು ನಾವು ಅವನ ವಚನಗಳನ್ನು ಅಧ್ಯಯನ ಮಾಡಿದಾಗ ಅರ್ಥ ಮಾಡಿಕೊಳ್ಳಬಹುದಾಗಿದೆ. ಹೀಗೆ ಜೀವನಾನುಭವಗಳಿಂದ ಮಾಗಿ ಪಕ್ವವಾದ ಅವನ ವ್ಯಕ್ತಿತ್ವ ಕೇವಲ ಅನುಭವದ ಮೊತ್ತವಾಗಿತ್ತು ಎನ್ನುವುದಕ್ಕಿಂತ ಅನುಭಾವದ ನಿಲುವನ್ನು ಪಡೆದಿದ್ದು ಅಥವಾ "ಆರೂಢ" (ಜ್ಞಾನದ ತುತ್ತತುದಿ) ಸ್ಥಿತಿಯನ್ನು ಮುಟ್ಟಿತ್ತು ಎಂದೇ ಹೇಳಬೇಕಾಗಿದೆ.

ಈ ಕಾರಣದಿಂದಲೇ ಅವನಿಗೆ ಜೀವನದ ಸಾರಸತ್ವಗಳ ಬಗ್ಗೆ, ಸಾರ್ಥಕತೆಗಳ ಬಗ್ಗೆ ತನ್ನದೇ ಆದ ರೀತಿಯಲ್ಲಿ ವಿಚಾರಗಳನ್ನು ಮಂಡಿಸುವುದು ಸಾಧ್ಯವಾಯಿತು ಎನ್ನುವುದನ್ನು ಮರೆಯುವಂತಿಲ್ಲ. ಮತ್ತೊಂದು ವಿಶೇಷದ ಸಂಗತಿಯೆಂದರೆ ವೈಯುಕ್ತಿಕವಾಗಿ ತಾನು ಸನ್ಯಾಸಿಯಾದ ಬಾಳು ಸವೆಸುತ್ತಾ ಸಾಗಿದ ಆತ ಇತರರೂ ಸನ್ಯಾಸಿ ಬಾಳನ್ನು ಬಾಳಬೇಕು ಎಂದು ಬಯಸದೇ ಅವರಿಗೆ ದಕ್ಕಿರುವ ಬದುಕಿನಲ್ಲಿರುವ ನ್ಯೂನತೆಗಳು, ಅರೆಕೊರೆಗಳನ್ನು, ಗುರುತಿಸಿಕೊಟ್ಟು, ತೋರಿಸಿಕೊಟ್ಟು ಅವುಗಳನ್ನು ತಿದ್ದಿಕೊಳ್ಳಲು ಬೇಕಾದ ಬೆಳಕಿನ ಮಾತುಗಳನ್ನು ಆಡಿ ಮಾರ್ಗದರ್ಶನ ನೀಡಿ ಅವರ ಬದುಕನ್ನು ಸಹ್ಯಸುಂದರವನ್ನಾಗಿಸಲು ಯತ್ನಿಸಿದನಾಗಿದ್ದಾನೆ.

ಅವನು ಇಡೀ ಭಾರತೀಯ ಸಾಹಿತ್ಯವನ್ನು ಎಷ್ಟು ಓದಿದ್ದನೋ, ಬಿಟ್ಟಿದ್ದನೋ ನಮಗೆ ಗೊತ್ತಿಲ್ಲ. ಆದರೆ ಹನ್ನೆರಡನೆಯ ಶತಮಾನದ ಶರಣರ ಜೀವನ ಕ್ರಮವನ್ನೆಲ್ಲಾ ಅವನು ಸ್ಪಷ್ಟವಾಗಿ ಅರ್ಥ ಮಾಡಿಕೊಂಡಿದ್ದನು, ಅವರ ದಟ್ಟ ಪ್ರಭಾವಕ್ಕೆ ಒಳಗಾಗಿದ್ದನು ಎನ್ನುವುದಕ್ಕೆ ಅವನ ವಚನಗಳಲ್ಲಿ ಸಾಕಷ್ಟು ಆಧಾರಗಳು ಲಭ್ಯವಿವೆ.

ಒಂದು ಬಗೆಯ ದಾರ್ಶನಿಕ ವ್ಯಕ್ತಿತ್ವ ಉಳ್ಳವನಾಗಿದ್ದ ಅವನಿಗೆ ಸಮಾಜ ಹಿಂದೆ ಏನಾಗಿತ್ತು? ಇಂದು ಏನಾಗಿದೆ ? ಮುಂದೆ ಏನಾಗಬೇಕು? ಎಂಬ ಅರಿವಿದ್ದಿತು.

ತನ್ನೆದುರಿನ ಸಮಾಜದ ಬದುಕಿನಿಂದಲೇ ತನ್ನ ಜ್ಞಾನ, ಅನುಭವ ಎಲ್ಲವನ್ನೂ ಆರ್ಜಿಸಿಕೊಂಡಿದ್ದ ಅವನಿಗೆ ಅದೊಂದು ಬಗೆಯ ಬಗೆಗಣ್ಣು (ಅಂತಃಚಕ್ಷು, ಮೂರನೇ ಕಣ್ಣು) ಇದ್ದುದರ ಜೊತೆಗೆ ಅವನು ತಾನು ಹೇಳಬೇಕಾದುದೆಲ್ಲವನ್ನೂ ಅಚ್ಚಕನ್ನಡ ಛಂದಸ್ಸಿನ ಹಾಡುಗಬ್ಬದ ಜಾತಿಗೆ ಸೇರಿದ ತ್ರಿಪದಿಯಲ್ಲೇ ಹೇಳಿರುವುದು ಅವನ ಹೆಚ್ಚುಗಾರಿಕೆ ವೈಶಿಷ್ಟ್ಯವಾಗಿದೆ. ಅದೇ ಅವನ ಅಭಿವ್ಯಕ್ತಿಗೆ ಒಗ್ಗಿದ, ದಕ್ಕಿದ ಏಕೈಕ ಪ್ರಕಾರವೂ ಆಗಿದೆ. (ಅವನು ಮತ್ತಾವ ಸಾಹಿತ್ಯಪ್ರಕಾರದಲ್ಲಿಯೂ ಕೃತಿ ರಚನೆ ಮಾಡಿಲ್ಲ ಎನ್ನುವುದನ್ನಿಲ್ಲಿ ಗಮನಿಸಬೇಕಾಗಿದೆ).

ಅವನಿಗೆ ಒಗ್ಗಿದ, ದಕ್ಕಿದ ಈ ತ್ರಿಪದಿ ಸಾಹಿತ್ಯ ಪ್ರಕಾರವನ್ನು ಹಿಡಿದು "ಆಡು ಮುಟ್ಟದ ಸೊಪ್ಪಿಲ್ಲ, ಸರ್ವಜ್ಞ ಹೇಳದ ವಸ್ತು ವಿಷಯಗಳಿಲ್ಲ" ಎಂಬಂತೆ ಕುಟುಂಬ, ಹೆಣ್ಣು, ಗುರುಶಿಷ್ಯ ಪರಂಪರೆ, ವೃತ್ತಿಗಳು, ದಾನ, ದ್ರವ್ಯ ಅಥವಾ ಹಣ, ಸಾಲ, ಜಾತಿ/ಕುಲ, ಸಜ್ಜನರ ಸಂಗ – ಈ ಎಲ್ಲವುಗಳ ಬಗ್ಗೆ ಅವನು ಹೇಳಬೇಕಾದುದನ್ನೆಲ್ಲಾ ಸಮರ್ಥವಾಗಿ, ಅರ್ಥಪೂರ್ಣವಾಗಿ ಹೇಳಿದ್ದಾನೆ. ಮಾನವನೇ ದೇವಮಾನವನಾಗಬೇಕೆಂಬ ಆಶಯ ಹೊತ್ತಿದ್ದ ಅವನು ವಾಸ್ತವವಾದಿಯಾಗಿ, ಆಶಾವಾದಿಯಾಗಿ ಹೇಳಿರುವ ಮಾತುಗಳೆಲ್ಲವೂ ಇಂದಿಗೂ, ಮುಂದಿಗೂ ಪ್ರಸ್ತುತವಾಗಿ ಕಾಣಬರುತ್ತಿವೆ. "ಸಾಹಿತ್ಯದ ಉದ್ದೇಶ ಸತ್ಯಾನ್ವೇಷಣೆ" ಎಂಬ ನಿಲುವು ಸರ್ವಜ್ಞನ ವಚನಗಳಲ್ಲಿ ಇರುವುದನ್ನು ನಾವು ಸ್ಪಷ್ಟವಾಗಿ ಗುರುತಿಸಬಹುದಾಗಿದೆ. ಜನರ ಬುದ್ಧಿಮತ್ತೆ, ಕ್ರಿಯಾಶಕ್ತಿಗಳನ್ನು ಪೋಷಿಸದ ನೀತಿಮತ್ತೆಯನ್ನು ಇನ್ನೂ ರೂಢಿಸಿಕೊಂಡಿರದ ಇಂದಿನ ನಮ್ಮ ವ್ಯವಸ್ಥೆಯಲ್ಲಿ ಅವನ ಮಾತುಗಳು ಮತ್ತಷ್ಟು ಪ್ರಸ್ತುತವಾಗಿ ಕಾಣಬರುತ್ತಿದೆ. ಹೀಗೆ ಮೇಲೆ ಹೇಳಲಾಗಿರುವ ಎಲ್ಲ ಉದ್ದೇಶಗಳ, ವ್ಯಾಪ್ತಿಗಳ ಹರಹನ್ನು ಮುಟ್ಟಿ ವಿಶ್ಲೇಷಿಸುವ, ಬಿತ್ತರಿಸುವ ಪ್ರಯತ್ನ ಪ್ರಸ್ತುತದ ನಿಬಂಧದಲ್ಲಿ ಮಾಡಲಾಗಿದೆ.

ಈ ಹಿನ್ನೆಲೆಯಲ್ಲಿ ನನ್ನ ನಿಬಂಧವು ಒಟ್ಟು ನಾಲ್ಕು ಅಧ್ಯಾಯಗಳನ್ನು ಒಳಗೊಂಡಿದೆ. ಮೊದಲ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ–ವ್ಯಾಪ್ತಿಗಳನ್ನು ಮಂಡಿಸಲಾಗಿದೆ. ಎರಡನೆಯ ಅಧ್ಯಾಯದಲ್ಲಿ 'ಹಿಂಡನಗಲಿದಗಜ ಸರ್ವಜ್ಞಕವಿ'ಯ ಜೀವನ ವೃತ್ತಾಂತಗಳನ್ನು ಕಾಲದೇಶಾದಿವಿಚಾರಗಳನ್ನು, ವಿದ್ಯಾಭ್ಯಾಸ, ಶಿಕ್ಷಣ, ಗುರುಪರಂಪರೆಗಳನ್ನು ಅವನು ಬಳಸಿದ ಜಾನಪದ ಮೂಲದ್ರವ್ಯಗಳನ್ನು ಕುರಿತು ಚರ್ಚಿಸಿದ್ದೇನೆ.

ಈ ಪ್ರಬಂಧದ ಮೂರನೇ ಅಧ್ಯಾಯವನ್ನು ಹಂತಹಂತವಾಗಿ ವಿಭಜಿಸಿಕೊಂಡು ಸರ್ವಜ್ಞನ ವಚನಗಳ ಸ್ವರೂಪ, ಛಂದಸ್ಸು, ವ್ಯಾಪ್ತಿಗಳ ಕುರಿತು ವಿವರ ಒದಗಿಸಿದ್ದೇನೆ. ಅನಂತರದಲ್ಲಿ ಇವನ ವಚನಗಳಲ್ಲಿರುವ ಸ್ತ್ರೀ ಅಥವಾ ಹೆಣ್ಣಿನ ಕುರಿತ ಅಭಿಪ್ರಾಯಗಳನ್ನು, ಗುರುಶಿಷ್ಯ ಪರಂಪರೆಗಳ ವಿಚಾರಗಳನ್ನು ಮಂಡಿಸಿದ್ದೇನೆ.

ವಿವಿಧ ಕಾಯಕ ಅಥವಾ ವೃತ್ತಿಗಳ ಶೀರ್ಷಿಕೆಯಡಿಯಲ್ಲಿ ಕೃಷಿಯ ಕುರಿತ ಅವನ ಆದರಣೆಯನ್ನು, ಒಕ್ಕಲಿಗನ, ಅಕ್ಕಸಾಲಿಗನ, ಬಣಜಿಗನ, ಕುಂಬಾರನ, ಜೇಡನ (ನೇಕಾರ), ಬೇಡನ, ಮೀಂಗುಲಿಗನ (ಬೆಸ್ತ), ಹೈನುಗಾರಿಕೆ, ರಸವಾದಿ, ವೈದ್ಯ ಹೀಗೆ ಸಮಾಜದ ವಿವಿಧ ವೃತ್ತಿಗಳ ಕುರಿತ ವಚನಗಳನ್ನು ವಿಶ್ಲೇಷಿಸಲಾಗಿದೆ.

ದಾನದ ಮಹತ್ವ, ಸಮಾಜದ ಮೂಲದ್ರವ್ಯವಾದ ಹಣ, ಸಮಾಜವನ್ನು ಬಾಧಿಸುವ ಜಾತಿ/ಕುಲ/ವರ್ಣ ಹಾಗೂ ಸಜ್ಜನರ ಸಂಗ, ಸಹವಾಸದ ಫಲ ಇವುಗಳ ಕುರಿತ ಸರ್ವಜ್ಞನ ಉತ್ಕೃಷ್ಟವೆನ್ನಬಹುದಾದ ಅಭಿಪ್ರಾಯಗಳನ್ನು ಅವನ ವಚನಗಳಲ್ಲಿರುವ ಹೂರಣಗಳನ್ನು ವಿಶದಪಡಿಸಿದ್ದೇನೆ.

ಸರ್ವಜ್ಞನ ಕಾಣ್ಕೆ/ಉಪಸಂಹಾರ ಎಂಬ ಶೀರ್ಷಿಕೆಯಲ್ಲಿ ಸರ್ವಜ್ಞ ಮುದ್ರೆ ಜನಮನದ ಮೇಲೆ ಅಚ್ಚಳಿಯದೆ ಉಳಿದಿರುವ, ಸರ್ವಜ್ಞನ ಅಸ್ತಿತ್ವ, ಮಹತ್ವ ಸಾಬೀತಾಗುವ ಹತ್ತಾರು ವಚನರತ್ನಗಳನ್ನು ಹೆಕ್ಕಿಕೊಟ್ಟು ಅವುಗಳ ಮೌಲ್ಯಮಾಪನದ ಫಲಿತಗಳನ್ನು ಗುರುತಿಸಿದ್ದೇನೆ.

ಒಟ್ಟಾರೆ ಕನ್ನಡ ಕವಿ ಸರ್ವಜ್ಞನ ವ್ಯಕ್ತಿತ್ವ, ಅವನ ಸಾಧನೆ, ಸಿದ್ಧಿಯನ್ನು ಕುರಿತು ಈವರೆಗೆ ಅನೇಕ ವಿದ್ವಾಂಸರು ನಡೆಸಿರುವ ಚರ್ಚೆ, ಸಂವಾದ, ನಿರ್ಣಯಗಳನ್ನು ಪರಿಚಯ ಮಾಡಿಕೊಳ್ಳುವುದು ಹಾಗೂ ಕನ್ನಡ ಸಾಹಿತ್ಯ ಹಾಗೂ ಸಾಂಸ್ಕೃತಿಕ ಚರಿತ್ರೆಯಲ್ಲಿ ಅವನ ಸ್ಥಾನವನ್ನು ಕಂಡುಕೊಳ್ಳುವುದೇ ಆಗಿದೆ. ಈ ಪ್ರಯತ್ನದಲ್ಲಿ ಅವನ ಸಮಸ್ತ ಸಾಹಿತ್ಯನಿಧಿಯನ್ನು ಪುನರಾವಲೋಕಿಸಿ, ಸಮೀಕ್ಷಿಸಿ, ಅದರ ವಿವಿಧ ಆಯಾಮಗಳನ್ನು ಗುರುತಿಸಿ, ಆತ ಹೇಗೆ ಆ ಯುಗದ ಜನಪದವನ್ನು ಪ್ರಚೋದಿಸಿದ ಹಾಗೂ ಪ್ರಭಾವಿಸಿದ ಎಂಬುದನ್ನು ಸೋದಾಹರಣವಾಗಿ ಸಲ್ಲಿಸಲಾಗಿದೆ.

ಉತ್ತಮ ಸಾಹಿತ್ಯ ನಾಲ್ಕುದಿನ ಬಾಳೀತು ಎನ್ನುವ ಮಾತಿದೆ. ಅವನ ವಚನಗಳು ಅವನ ಕಾಲದ ಅನಂತರವೂ ನೂರಾರು ವರ್ಷ, ಮುಖ್ಯವಾಗಿ ಜನಗಳ ನಾಲಿಗೆಯಲ್ಲಿ ನಲಿದಾಡುತ್ತ, ಅನೇಕ ಪಾಠಾಂತರಗಳನ್ನು, 'ಪ್ರಕ್ಷಿಪ್ತತೆ'ಗಳನ್ನು ಹೇರಿಕೊಳ್ಳುತ್ತ, ಸಾಹಿತ್ಯಸೀಮೆಯ 'ಅರೋಚಿ'ಗಳನ್ನು 'ಸತೃಣಾಭ್ಯವ್ಯವಹಾರಿ'ಗಳನ್ನು ಓರಂತೆ, ತಲೆಕೆಡಿಸುತ್ತಾ ಬಾಳಿಬಂದಿವೆ. ಈ ಚಿರಂತನತೆಯ ಗುಟ್ಟೇನು ಎಂಬುದನ್ನು ಬೆದಕುವುದು, ಅದನ್ನು ಅನಾವರಣಗೊಳಿಸುವುದು, ಸಾಹಿತ್ಯಾಸಕ್ತರೊಡನೆ ಸಹಚಿಂತನ ಮಾಡುವುದು ಸಹ ಈ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಯಾಗಿದೆ ಎಂದು ನಮ್ರವಾಗಿ ನಿವೇದಿಸಬಯಸುತ್ತೇನೆ.

# ಅಧ್ಯಾಯ ೨

## ಹಿಂಡನಗಲಿದಗಜ ಸರ್ವಜ್ಞ ಕವಿಯ ವೃತ್ತಾಂತ

'ಸರ್ವಜ್ಞನ ವಚನ'ಗಳೆಂಬ ಈ ವಿಶಿಷ್ಟ ಮೌಖಿಕ ಪರಂಪರೆಯ ಸಾಹಿತ್ಯವನ್ನು ಸೃಷ್ಟಿಸಿದ ಅಥವಾ ನಿರೂಪಿಸಿದ ಸಾಹಿತ್ಯಬ್ರಹ್ಮನ ಹುಟ್ಟು, ಹಿನ್ನೆಲೆ, ಅಧ್ಯಯನ, ಪ್ರಭಾವ, ಪರಿಸರಗಳನ್ನು ಪರಿಚಯ ಮಾಡಿಕೊಳ್ಳುವುದು ಸಹ ಅಗತ್ಯವೂ ಆದ್ಯವೂ ಆದ ಕರ್ತವ್ಯವಾಗಿದೆ. ಯಾವುದೇ ಸಾಹಿತ್ಯಕೃತಿ, ಒಂದು ವ್ಯಕ್ತಿತ್ವದ ಅಭಿವ್ಯಕ್ತಿ. ಆ ವ್ಯಕ್ತಿತ್ವವನ್ನು ರೂಪಿಸಿದ ಶಕ್ತಿವಿಶೇಷಗಳು, ಪ್ರಭಾವಗಳು, ನೋವುನಲಿವುಗಳು, ಪ್ರಾಕೃತಿಕ, ನೈಸರ್ಗಿಕ ಸನ್ನಿವೇಶಗಳ ಗಾಢ ಪ್ರಭಾವಗಳು 'ಕವಿಪ್ರತಿಭೆ' ಎಂಬ ಅಗ್ನಿದಿವ್ಯದಲ್ಲಿ ರೂಪಾಂತರಗೊಂಡು ಅದ್ಭುತ ಕಾವ್ಯಜಗತ್ತನ್ನು ರೂಪಿಸುತ್ತದೆ. ಕವಿಯಿಲ್ಲದೆ ಕಾವ್ಯವಿಲ್ಲ; ಆ 'ಕವಿ'ಯನ್ನು ರೂಪಿಸಿದ ಅವನ ಹುಟ್ಟು, ಬಾಲ್ಯ, ಬದುಕು ಆದ್ಯಂತವಾಗಿ ವ್ಯಾಪಿಸಿವೆ. ಒಂದು ಮಾತಿನಲ್ಲಿ ಹೇಳುವುದಾದರೆ ಕವಿಯ ಜೀವನಾನುಭವವೇ ರಸಧಾರೆಯಾಗಿ, ಕಾವ್ಯವಾಗಿ ಹರಿದುಬರುತ್ತದೆ. ಆದ್ದರಿಂದ ಕವಿಯ ಕಾವ್ಯಪ್ರಪಂಚವನ್ನು ಪ್ರವೇಶಿಸಲು, ಅವನ ಖಾಸಗಿ ಬದುಕಿನ ವಿವರಗಳು, ಅವನ ಹಿನ್ನೆಲೆ, ಅವನ ಪರಂಪರೆ, ಸಂಸ್ಕಾರ, ಅವನು ಪಡೆದ ಶಿಕ್ಷಣಗಳ ಅರಿವು ಅಗತ್ಯವೇ.

'ಸರ್ವಜ್ಞ'ನೆಂದು ಖ್ಯಾತನಾದ ಕವಿಸಾರ್ವಭೌಮನ ವೈಯುಕ್ತಿಕ ವಿಚಾರಗಳನ್ನು ಹುಡುಕುತ್ತ ಹೋದರೆ ಸಮಸ್ಯಾಸಂದೇಹವೇ ನಮ್ಮನ್ನು ದಿಕ್ಕೆಡಿಸುತ್ತದೆ (ಈ ಸಮಸ್ಯೆ ನಮ್ಮ ಪ್ರಾಚೀನಕವಿಗಳಲ್ಲಿ ಅನೇಕರ ಬಗ್ಗೆ ಇದ್ದುದೇ). ಈತನ ವಿಚಾರದಲ್ಲಿ ಸಮಸ್ಯೆ ಆತನ ಹೆಸರಿನಿಂದಲೇ ತೊಡಗುತ್ತದೆ. 'ಸರ್ವಜ್ಞ' ಎಂಬುದು ಕವಿಯ ಸಹಜನಾಮವೇ, ಬಿರುದೇ, ಅಂಕಿತವೇ? ಎಂದು ಪ್ರಶ್ನೆಗಳನ್ನು, ಊಹೆಗಳನ್ನು ಮಾಡುತ್ತಾ ಹೋಗಬಹುದೇ ಹೊರತು 'ಸರ್ವಸಮ್ಮತ'ವಾದ ಸಂಭಾವ್ಯವಾದ ಸಮಜಾಯಿಷಿ ಇಲ್ಲಿಯವರೆಗೆ ದೊರೆತಂತೆ ತೋರುವುದಿಲ್ಲ.

ಸರ್ವಜ್ಞ ರಚಿತ ವಚನವೆಂದು (ಪ್ರಕ್ಷಿಪ್ತವಲ್ಲ) ಅನೇಕ ವಿದ್ವಾಂಸರು ಒಪ್ಪಿರುವ ಅವನ ತ್ರಿಪದಿಯೊಂದರಿಂದಲೇ ಈ ಚರ್ಚೆಯನ್ನು ಪ್ರಾರಂಭಿಸುವುದು ಸೂಕ್ತ.

"ಸರ್ವಜ್ಞನೆಂಬುವನು ಗರ್ವದಿಂದಾದವನೇ?
ಸರ್ವರೊಳೊಂದೊಂದು ನುಡಿಗಲಿತು, ವಿದ್ಯದ
ಪರ್ವತವೇ ಆದ ಸರ್ವಜ್ಞ"[೧]

ಇದಕ್ಕೆ ಪಾಠಾಂತರವೂ ಇದೆ.

ಸರುವಜ್ಞನೆಂಬುವನು ಗರುವದಿಂದಾದವನೇ
ಅರುವರಲಿ ಆಡಿ ಕಲಿಕಲಿತು ವಿದ್ಯದ
ಪರುವತವಾದ ಸರ್ವಜ್ಞ [೨]

ಈ ವಚನದಲ್ಲಿ 'ಸರ್ವಜ್ಞ' ಎಂಬುದು ಕರ್ತೃವಿನ ನಾಮಧೇಯ ಎಂಬುದು ಸ್ಪಷ್ಟವಾಗಿಯೇ ನಿರೂಪಿತವಾಗಿದೆ. ಆದರೆ, ಅದು ಇಟ್ಟ ಹೆಸರೋ, ಇಟ್ಟುಕೊಂಡ ಹೆಸರೋ, ಕೊಟ್ಟ ಹೆಸರೋ ಎಂದು ಅನುಮಾನಿಸಲು, ತರ್ಕಿಸಲು ವಿಪುಲ ಅವಕಾಶವಿದೆ.

ವಿದ್ವಾಂಸರು ತಮ್ಮ ಊಹೆ, ಪಾಂಡಿತ್ಯ, ಭಾಷಾಸಂಪನ್ನತೆ ಮತ್ತು ಲಹರಿಗಳಿಗನುಗುಣವಾಗಿ ಈ ವಾದವನ್ನು ಬೆಳೆಸಿ ತಮ್ಮ ಅಭಿಪ್ರಾಯಗಳನ್ನು ದಾಖಲಿಸಿದ್ದಾರೆ. ಅವು ಸಾಕಷ್ಟು ಕುತೂಹಲಕಾರಿಯಾಗಿಯೂ ಇವೆ.

"ಸರ್ವಜ್ಞ ಎಂಬುವುದು ಶೈವಕವಿಯೊಬ್ಬನ ಅಂಕಿತನಾಮ" [೩]

ರಾಮ, ಕೃಷ್ಣ, ಬೀರಯ್ಯ, ಮಾದಯ್ಯ ಎಂಬುದು 'ಅಂಕಿತನಾಮ'ವೆಂದರೆ, ಅವರ ತಂದೆ ತಾಯಿಗಳೋ, ಹಿರಿಯರೋ ಇಟ್ಟ ಹೆಸರು ಎಂದು ಅರ್ಥವಾಗುವಂತೆಯೇ ಇಲ್ಲೂ ಅರ್ಥೈಸಬಹುದು. ಅಲ್ಲದೆ ಅದು ನಿಜನಾಮವಲ್ಲ; ಅಂಕಿತವಾದ ನಾಮ ಎಂದು ಸಹ ಅರ್ಥೈಸಬಹುದು. ಉದಾಹರಣೆಗೆ ಕೂಡಲಸಂಗಮ, ಗುಹೇಶ್ವರಾ, ಪುರಂದರವಿಠಲ – ಎಂಬಂತೆ.

ಸರ್ವಜ್ಞ ಎಂಬುದು ಬಿರುದು,[೪] ಜನತೆಯಿಂದ ದೊರೆತದ್ದು ಎಂದು ಆಸ್ಥಾನವಿದ್ವಾನ್ ಬಿ. ಶಿವಮೂರ್ತಿ ಶಾಸ್ತ್ರಿಗಳು ಅಭಿಪ್ರಾಯ ಪಡೆಯುತ್ತಾರೆ.

"ಸರ್ವಜ್ಞ ಎಂಬ ನಾಮಾಂಕಿತವೂ ಅವನ ಹೆಸರಲ್ಲವೆಂದು ಹೇಳಬಹುದು" [೫] ಎಂದು ಆರ್. ರೇಣುಕಮ್ಮ ಅವರು ಅಭಿಪ್ರಾಯಪಡುತ್ತಾರೆ

ಎಂ. ಚಿದಾನಂದಮೂರ್ತಿಯವರು (ವಚನಕಾರರ ಅಂಕಿತಗಳಂತೆ) 'ಸರ್ವಜ್ಞ' ಎಂಬುದೇ ಸಹಜವೆಂಬುದು ಸ್ಪಷ್ಟವಾಗಿದೆ"[೬] ಎಂದು ಬರೆದಿದ್ದಾರೆ.

"'ಸರ್ವಜ್ಞ' ಎಂಬುದು ಎಲ್ಲವನ್ನೂ ತಿಳಿದ ಜ್ಞಾನಸ್ವರೂಪನಾದ ಭಗವಂತನನ್ನು ಮನಸ್ಸಿನಲ್ಲಿಟ್ಟುಕೊಂಡು ಉಪಯೋಗಿಸಿದ ಅಂಕಿತವಾಗಿ ಕಾಣುತ್ತದೆ"[೭] ಎಂದು ಪ್ರಸಿದ್ಧ ವಿದ್ವಾಂಸರಾದ ಪ್ರೊ. ಎ.ಆರ್.ಕೃಷ್ಣಶಾಸ್ತ್ರಿಗಳು ಅಭಿಪ್ರಾಯಪಡುತ್ತಾರೆ

“ಸರ್ವಜ್ಞ’ ಎಂಬುದು ವ್ಯಕ್ತಿಗತವಾದ ಹೆಸರಲ್ಲ; ಅದು ವ್ಯಕ್ತಿತ್ವನಿರಸನದಿಂದ ಸಿದ್ಧಿಸಿದ ಸಮಷ್ಟಿಚೇತನದ ಸ್ವರೂಪ ಎಂಬುದು ಸ್ಪಷ್ಟ”. ಇಲ್ಲಿ ಅದು ಬಿರುದು ಇರಬೇಕೆಂಬ ಸೂಚನೆ ದೊರೆಯುತ್ತದೆ.

ಎಲ್. ಬಸವರಾಜು ಅವರು ತಮಗೆ ಲಭ್ಯವಾದ ಪ್ರಾಚೀನವೆನ್ನಬಹುದಾದ ಪ್ರತಿಯೊಂದರ ಆಧಾರವನ್ನು ತೋರಿಸಿ, ಅವನ ಅಂಕಿತವನ್ನು ಪರಮಾರ್ಥ ಎಂದು ಕಾಣಿಸಿದ್ದಾರೆ. ಆವರಣದಲ್ಲಿ ‘ಸರ್ವಜ್ಞನ ವಚನಗಳು’ ಎಂದು ಉಪಶೀರ್ಷಿಕೆ ಕೊಟ್ಟಿದ್ದಾರೆ (೧೯೭೨). ಅವರೇ ಅನಂತರದ ಆವರ್ತಿಗಳಲ್ಲಿ ‘ಪರಮಾರ್ಥ’ ಎಂಬ ಅಂಕಿತವನ್ನು ಕೈಬಿಟ್ಟು ಜನಪ್ರಿಯವಾದ ‘ಸರ್ವಜ್ಞ’ ಎಂಬುದನ್ನೇ ಸ್ವೀಕರಿಸಿ "ಸರ್ವಜ್ಞನ ವಚನಗಳು" ಎಂದು ಶೀರ್ಷಿಯನ್ನು ಬದಲಾಯಿಸಿದ್ದಲ್ಲದೆ, ಅಂಕಿತವನ್ನು ಸಹ ಸರ್ವಜ್ಞ ಎಂದು ಉಳಿಸಿಕೊಂಡಿದ್ದಾರೆ.

‘ಜನತೆಯಿಂದ, ಮಹಾಜನಗಳಿಂದ ಅವನಿಗೆ ಸಿಕ್ಕ ಬಿರುದಾಗಿದೆ......... ವೀರಶೈವರಲ್ಲಿ ವಿರಕ್ತರಾದ ಮೇಲೆ ಅವರ ಪೂರ್ಣಾಶ್ರಮದ ಹೆಸರು ಹೋಗಿ ಹೊಸ ಹೆಸರೇ ಬೆಳಕಿಗೆ ಬರುವ ಸಂಪ್ರದಾಯವಿದೆ”[೮]

ಹೀಗೇ ಅನೇಕ ವಿದ್ವಾಂಸರ, ಸಂಶೋಧಕರ ವಿಚಾರಲಹರಿ 'ಸರ್ವಜ್ಞ'ನ ನಾಮಾಂಕಿತವನ್ನು ನಿರ್ಧರಿಸುವಲ್ಲಿ ವಿವಿಧ ತರ್ಕಗಳಿಗೆ, ವಾದವಿವಾದಗಳಿಗೆ ಕಾರಣವಾಗಿದೆ.

ಆದರ ಮುಖ್ಯ ತಿರುಳನ್ನು ಗ್ರಹಿಸಿದರೆ, ಅದು ಇಟ್ಟ ಹೆಸರೇ? ಕೊಟ್ಟ ಅಥವಾ ತೊಟ್ಟ ಹೆಸರೇ ಎಂಬಲ್ಲಿಗೆ ಬಂದು ವಿರಮಿಸುತ್ತದೆ ಈ ವಾದ.

ಇಟ್ಟ ಹೆಸರೆಂದು ಸ್ವೀಕರಿಸೋಣವೆಂದರೆ, ಪರಂಪರೆಯಲ್ಲಿ ಅಂಥ ಉದೇಹರಣೆಗಳು ದೊರೆಯದೆ ವಿಲಕ್ಷಣವಾಗಿದೆ. ಕೊಟ್ಟಬಿರುದು ಎಂದು ಸ್ವೀಕರಿಸೋಣವೆಂದರೆ ವಿನಯಶೀಲನಾದ "ಸರ್ವಜ್ಞ" ಆ ಬಿರುದನ್ನು ಒಪ್ಪಿ ಹಾಗೇ ತನ್ನನ್ನು ಕರೆದುಕೊಳ್ಳಲಾರ, ಇತ್ಯಾದಿ.

ಆದರೆ ಸ್ವಲ್ಪ ಪ್ರಾಂಜಲವಾಗಿ ಆಲೋಚಿಸಿದರೆ ಈ ಸಮಸ್ಯೆ ಬಗೆಹರಿಯುತ್ತದೆ.

ಮೊದಲನೆಯದಾಗಿ, ಸಮಾಜದಲ್ಲಿ ಇಂದಿಗೂ ರೂಢಿಯಲ್ಲಿರುವ ಶಿವಪ್ಪ, ಕೃಷ್ಣಪ್ಪ, ಮುರಾರಿ ಹೀಗೆ ನೇರವಾಗಿ ಇಷ್ಟದೇವತೆಗಳ ಹೆಸರು ಅಥವಾ ಆ ದೇವತೆಗಳ ಗುಣವಾಚಕಗಳಾದ ಅನಂತ, ಅಪ್ರಮೇಯ, ಅಚ್ಯುತ, ಇತ್ಯಾದಿ ನಾಮಧೇಯಗಳಿಲ್ಲವೆ? ‘ಸರ್ವಜ್ಞ’ ಎಂಬ ಹೆಸರು ಈ ಗುಣವಾಚಕಗಳಿಂದ ಹೇಗೆ ಭಿನ್ನವೋ, ಅಸಹಜವೋ ಆಗುತ್ತದೆ.

ಅಥವಾ ಕವಿಯು ತನ್ನ ನಿಜನಾಮಧೇಯವನ್ನು ಮರೆಸಿ, ಸರ್ವಜ್ಞ ಎಂಬುದನ್ನೇ ಅಂಕಿತನಾಮವಾಗಿಯೋ, ಅಂಕಿತವಾಗಿಯೋ ಬಳಸಿರಬಹುದು.

ಪ್ರಸಿದ್ಧವಾದ, ಮೇಲೆ ಉಲ್ಲೇಖಿತವಾದ "ಸರ್ವಜ್ಞನೆಂಬುವನು ಗರ್ವದಿಂದಾದವನೇ? ಸರ್ವರೊಳೊಂದೊಂದು ನುಡಿಗಲಿತು, ವಿದ್ಯದ ಪರ್ವತವೇ ಆದ ಸರ್ವಜ್ಞ" ಎಂಬ ತ್ರಿಪದಿಯಲ್ಲಿ ತನ್ನ ನಿಜನಾಮವನ್ನು ಕಂಠೋಕ್ತವಾಗಿ ಹೇಳಿಕೊಂಡಿರುವುದಲ್ಲದೆ, ಮಹಾಸರ್ವಜ್ಞನೋ ಇವನು ಎಂದು ಯಾರೋ ಆಡಿರಬಹುದಾದ ಕುಹಕಕ್ಕೂ ಉತ್ತರಿಸಿದ್ದಾನೆ.

ಆದ್ದರಿಂದ 'ಸರ್ವಜ್ಞ'ನೆಂಬುದು ಆ ಕವಿಗೆ ಇಷ್ಟವಾಗಿರುವ, ಒಪ್ಪಿತವಾಗಿರುವ, ಕನ್ನಡ ಜನಪದವು ಅಂಗೀಕರಿಸಿರುವ ನಾಮಧೇಯ ಎಂದು ಈ ವಾದವನ್ನು ಇಲ್ಲಿಗೆ ಮುಕ್ತಾಯ ಮಾಡಬಹುದು.

## ಜನ್ಮಾಂತರದ ಹೆಸರು ಮತ್ತು ಅದರ ಪ್ರಸ್ತಾಪ

ಅವನ ನೈಜವೆನ್ನಬಹುದಾದ (ಸ್ವಂತದ್ದು) ವಚನಗಳಲ್ಲಿ ಈ ಕೆಳಗಿನವುಗಳು ಸೇರಿವೆ. ಅವನ್ನು ಪರಿಶೀಲಿಸೋಣ.

ಮುನ್ನಪೂರ್ವಜಲಾನು ತನ್ನಗಧರನಾಳು
ಎನ್ನಯ ಪೆಸರು ಪುಷ್ಪದತ್ತನು ಎಂದು
ಮನ್ನಿಪರು ನೋಡ ಸರ್ವಜ್ಞ

ಅಂದಿನ ಪೂದತ್ತ (ಪುಷ್ಪದತ್ತ) ಬಂದ ವರರುಚಿಯಾಗಿ
ಮುಂದೆ ಅವ ಸಾಲೆ ಸರ್ವಜ್ಞನೆಂದೆನಿಸಿ
ನಿಂದವನು ನಾನೇ ಸರ್ವಜ್ಞ

ಈ ಎರಡು ಸಾಲೆ ವಚನಗಳು ಉತ್ತಂಗಿಯವರ ಸಂಪಾದನೆಯಲ್ಲೂ, ಎಲ್.ಬಸವರಾಜು ಅವರ ಸಂಪಾದನೆಯಲ್ಲಿ ಎಡೆಪಡೆದಿವೆ. ಭಾವಕರು, ಸಂಪ್ರದಾಯವಾದಿಗಳು ಇದನ್ನು ಅಕ್ಷರಶಃ ಸ್ವೀಕರಿಸಿ ನಂಬಬಹುದು. ಇದು ಶ್ರದ್ಧೆಯ ಮಾತು, ವಿಚಾರಶೀಲರು ವಿವೇಚಿಸಬಹುದು, ಎರಡಕ್ಕೂ ಅವಕಾಶ, ಆಸ್ಪದ ದಂಡಿಯಾಗಿದೆ.

ಹರಿಹರನು ತಮ್ಮ ಕಥಾನಾಯಕರ ಮೂಲವನ್ನು ಕೈಲಾಸದ ಗಣನಾಥರಲ್ಲಿ ಕಾಣುವುದಿಲ್ಲವೆ? ಅದರ ಪ್ರಭಾವವೂ ಇಲ್ಲಿರಬಹುದು. ಆ ಮಾದರಿಯ ದುರ್ಬಲ ಅನುಕರಣೆ ಇದು;

ಅವನ ಹುಟ್ಟಿನ ಬಗ್ಗೆ ಇರಬಹುದಾದ ತೊಡಕುಗಳು, ಅದರ ಸಾಮಾಜಿಕ ಪರಿಣಾಮದಿಂದ ನೊಂದು ಅವನು ದೇವಮೂಲವನ್ನು, ಜನ್ಮಾಂತರದ ಪ್ರಸಂಗವನ್ನು ತಲುಪಿರಬಹುದು.

ಎರಡನೆಯ ವಚನವನ್ನು ನಾವು ಸರ್ವಜ್ಞಕೃತವೆಂದು ಸ್ವೀಕರಿಸುವುದಾದರೆ, ಅವನ ಪೂರ್ವದ ಹೆಸರು 'ವರರುಚಿ' ಎಂದಿದ್ದು, ಆನಂತರ 'ಸಾಲೆಸರ್ವಜ್ಞ' ಎಂದು ಮಾರ್ಪಟ್ಟಿರಬಹುದು. ಅವನು ಕುಂಬಾರಸಾಲೆಯಲ್ಲಿ ಬೆಳೆದ ಎಂಬ ಸೂಚನೆಯನ್ನು ಕೊಡುತ್ತದೆ.

ಅನುಭಾವಿಗಳು, ಸಾಧುಸಂತರು ತಮ್ಮ ಶಿಷ್ಯರಿಗೆ ತಮ್ಮ ಪೂರ್ವಜನ್ಮದ ವೃತ್ತಾಂತವನ್ನು ತಿಳಿಸಿದಂಥ ಉದಾಹರಣೆಗಳು ಆಧುನಿಕ ಕಾಲದಲ್ಲೂ ದೊರೆಯುತ್ತವೆ. ಉದಾ: "ಶಿರಡಿ ಸಾಯಿಬಾಬಾರವರು ಯಾರು ಹಿಂದೆ ಶ್ರೀರಾಮನೂ, ಶ್ರೀ ಕೃಷ್ಣನೂ ಆಗಿದ್ದನೋ ಅವನೇ ನಾನು" ಎಂದಿದ್ದಾರೆ.

ಶ್ರೀ ರಾಮಕೃಷ್ಣ ಪರಮಹಂಸರು ತಮ್ಮ ಮತ್ತು ನರೇಂದ್ರನ ಪೂರ್ವಜನ್ಮವೃತ್ತಾಂತವನ್ನು ತಿಳಿಸಿದರೆಂದು ಜೀವನಚರಿತ್ರೆಗಳಲ್ಲಿ ಉಲ್ಲೇಖವಾಗಿದೆ ಎಂದು ಬಲ್ಲವರ ಮಾತು.

ಆದ್ದರಿಂದ ಇಂಥ ಪ್ರಸಂಗಗಳನ್ನು "ಒಂದು ಚಿಟಿಕೆ ಉಪ್ಪಿನೊಡನೆ ಸ್ವೀಕರಿಸಬಹುದು" (ಇಂಗ್ಲಿಷಿನಲ್ಲಿ ಹೇಳುವಂತೆ "we may take it with a pinch of salt").

ಈ ಎರಡು ತ್ರಿಪದಿಗಳು ಅವನ ಪೂರ್ವಜನ್ಮದ ವೃತ್ತಾಂತವನ್ನು ತಿಳಿಸಲಿ, ಬಿಡಲಿ, ಅವನ ಹುಟ್ಟಿನ ಬಗ್ಗೆ ಇರುವ ರಹಸ್ಯಗಳ ಬಗ್ಗೆ, ಸಮಸ್ಯೆಗಳ ಬಗ್ಗೆ ನಮ್ಮ ಗಮನ ಸೆಳೆಯುತ್ತವೆ.

## ಜನ್ಮವೃತ್ತಾಂತ, ದೇಶ ಕಾಲ ಇತ್ಯಾದಿ

ಅವನ ಜನ್ಮವೃತ್ತಾಂತ, ಕಾಲದೇಶಾದಿಗಳ ಬಗ್ಗೆ ನಮ್ಮ ಸಾಹಿತ್ಯದಲ್ಲಿ ಅನ್ಯತ್ರ ಏನೂ ಉಲ್ಲೇಖ, ಪ್ರಸ್ತಾಪ, ಸೂಚನೆ ದೊರೆಯುವುದಿಲ್ಲವಾಗಿ, ಅವನ ವಚನಗಳನ್ನು ಆಧರಿಸಿ, ಅನ್ವಯಿಸಿ, ಊಹಿಸಿ, ತರ್ಕಿಸಿ ಆ ವಿವರಗಳನ್ನು ಪಡೆಯಬೇಕಾಗಿದೆ.

ಈ ಕೆಳಗೆ ಕೊಟ್ಟಿರುವ ವಚನಗಳು ಆ ದೃಷ್ಟಿಯಿಂದ ಮಹತ್ತ್ವದ್ದಾಗಿವೆ.

ಮಕ್ಕಳಿಲ್ಲವು ಎಂದು ಅಕ್ಕಮಲ್ಲಮ್ಮನು
ದುಕ್ಕವ ಬಸವರಸಗರುಪಲು ಕಾಶಿಯ
ಮುಕ್ಕಣ್ಣನೊಲಿದ ಸರ್ವಜ್ಞ!

ಮಾಸೂರಬಸವರಸ ಕೂಸನೀಶನಕೇಳೆ
ಕಾಶಿಯ ಅಭವಗೊಳು ಪಡೆದವರವದುವೆ
ಸೂಸಿತೆಂತೆನಲು ಸರ್ವಜ್ಞ!

ಗಂಡಾಗಬೇಕೆಂದು, ಪಿಂಡವನು ನುಂಗಲದು
ರಂಡೆ ಮಾಳವ್ವೆಯೊಳು ಬರುವುದೆಂತೆನಲು
ಕಂಡದನು ಪೇಳ್ದೆ ಸರ್ವಜ್ಞ!

ಗಡಿಗೆ ಮಡಿಕೆಯ ಕೊಂಡು ಅಡಿಗೆಯ ವೇಳೆಯೊಳು
ಬಿಡದೆ ಮಳೆ ಮೋಡ ಪೊಡೆಯಲ್ಕೆ ಈರ್ವರಿಗೆ
ತಡಬಡಲಾಯ್ತು ಸರ್ವಜ್ಞ!

ಅಂಬಲೂರಳಗೆಸೆವ ಕುಂಬಾರಸಾಲೆಯಲಿ
ಇಂಬಿನ ಕಳೆಯ ಮಾಳಿಯೊಳು ಬಸವರಸ
ನಿಂಬಿಟ್ಟನೆನ್ನ ಸರ್ವಜ್ಞ!

ಹೆತ್ತವಳು ಮಾಳಿಯ ನೊತ್ತಿ ತೆಗೆದವಳು ಬೆ
ನ್ನೊತ್ತಿ ಹಿಡಿದವಳು ಕಾಳಿ ತಾ ಮೊರದೊಳಗೆ
ಬಿತ್ತರಿಸಿದವಳು ಸರ್ವಜ್ಞ!

ಈ ಆರು ವಚನಗಳು ಅವನ ಜನ್ಮವೃತ್ತಾಂತವನ್ನು ನೇರವಾಗಿ, ಸಂದೇಹಕ್ಕೆ ಆಸ್ಪದವಿಲ್ಲದಂತೆ ನಿರೂಪಿಸಿತ್ತವೆ. ಬೇರೆ ಆಧಾರಗಳ ಅಭಾವದಲ್ಲಿ ಇವನ್ನೇ ನೆಮ್ಮಿ ನಾವು ಅವನ ಹೆತ್ತವರ ಬಗ್ಗೆ, ಬಾಲ್ಯದ ಬಗ್ಗೆ ವಿವರಗಳನ್ನು ಪಡೆಯಬೇಕಾದ ಅನಿವಾರ್ಯತೆ ಇದೆ. ಅವನೇ ಈ ವಿವರಗಳನ್ನು ನಿರೂಪಿಸಿದ್ದರೂ, ಇವು ಅವನು ಇತರ ಆತ್ಮೀಯರಿಂದ, ಕುಲಬಾಂಧವರಿಂದ, ನೆರೆಹೊರೆಯವರಿಂದ ಕುತೂಹಲಕ್ಕೆ ಕೇಳಿ ಪಡೆದ ವಿವರಗಳು. ಅವನ ಹುಟ್ಟು, ಶೈಶವ, ಅವನ ಅನುಭವಕ್ಕೆ, ಅರಿವಿಗೆ ಸಹಜವಾಗಿಯೇ ಲಭ್ಯವಾಗದ್ದು, ಅಲ್ಲವೆ!

ಈ ವಚನಗಳನ್ನು ಆಧರಿಸಿ ಹೀಗೆ ನಿರ್ಣಯಿಸಬಹುದು.

ಮಾಸೂರ ಬಸವರಸ, ಮಲ್ಲಮ್ಮ ದಂಪತಿಗಳು. ಸರ್ವಜ್ಞನ ತಂದೆ ಬಸವರಸನಾದರೂ ತಾಯಿ ಮಲ್ಲಮ್ಮ ಅಲ್ಲ; ದಾರಿಯಲ್ಲಿ ಬಸವರಸ ತಂಗಿದ್ದ ಕುಂಬಾರಸಾಲೆಯ ಹೆಣ್ಣು ಮಾಳವ್ವೆ ಅಥವಾ ಮಾಳಿ. ಇನ್ನು ಮುಂದುವರೆದು ತನ್ನ ಹೆರಿಗೆಯಲ್ಲಿ ನೆರವಾದ ಹೆಣ್ಣನ್ನು ಸೂಚಿಸಿದ್ದಾನೆ.

ಈ ಜನ್ಮವೃತ್ತಾಂತವನ್ನು ತಿಳಿಸುವ ಮಹತ್ತ್ವದ ವಚನಗಳು ಸಿದ್ಧವೀರಣ್ಣದೇವರು ಸಂಗ್ರಹಿಸಿರುವ ಸರ್ವಜ್ಞಮೂರ್ತಿಯ ಆಚರಣೆಯ ಸಂಬಂಧದ ತ್ರಿವಿಧಿಗಳಲ್ಲಿ ಇಲ್ಲವೇ ಇಲ್ಲ. ಅಲ್ಲದೆ ........ ಆತನ ಹುಟ್ಟನ್ನು ಹೇಳುವ ತ್ರಿಪದಿಗಳು ಮಾತ್ರ ಪ್ರಕ್ಷೇಪವಲ್ಲವೆಂದು ಹೇಳಲು ಆಧಾರವಿಲ್ಲ. ಅಲ್ಲದೆ, ತನ್ನ ತಂದೆತಾಯಿಂದಿರ ಪ್ರಣಯದ ಸಂಗತಿಯನ್ನು ಮಗನಾದವನು ಹೇಳುವುದು, ಅದೂ ಆ ಸಂದರ್ಭವನ್ನು ಗಮನಿಸಿದರೆ, ತೀರ ಅಸಂಭವವೆನ್ನಿಸುತ್ತದೆ"[೯] ರಾಷ್ಟ್ರಕವಿ ಜಿ.ಎಸ್.ಶಿವರುದ್ರಪ್ಪನವರ ಮಾತುಗಳು ಹೆಚ್ಚು ವಿಚಾರಾರ್ಹವಾದವು.

ಆದ್ದರಿಂದ ಲಭ್ಯ ಆಧಾರಗಳನ್ನು ಬಳಸಿ ಈ ಪರ್ಯಾಯ ಊಹೆಗಳನ್ನು ಮಾಡಬಹುದೆಂದು ತೋರುತ್ತದೆ.

ಸರ್ವಜ್ಞನು ಬಸವರಸ + ಮಾಳಿಯರ ಅನೈತಿಕ ಸಂಬಂಧದ ಫಲ

ಸರ್ವಜ್ಞನು ಮಾಳ + ಮಾಳವ್ವ ಎಂಬ ಕುಂಬಾರ ದಂಪತಿಗಳ ಫಲ

ಈ ಎರಡು ಜನ್ಮವೃತ್ತಾಂತಗಳು ಅಂದಿನ ಸಾಮಾಜಿಕ ನಡಾವಳಿಯ ರೀತಿಯಿಂದ ಗೌರವಾಸ್ಪದವಾದುದಲ್ಲ. ಆದ್ದರಿಂದಲೇ ಸರ್ವಜ್ಞ ಪರಲೋಕ ಮೂಲದ ಜನ್ಮಾಂತರದ ಕಥೆಯನ್ನು ಊಹಿಸಿ, ಕಲ್ಪಿಸಿ, ಭಾವನಾತ್ಮಕ ತೃಪ್ತಿಪಟ್ಟುಕೊಂಡಂತೆ ತೋರುತ್ತದೆ.

ಈ ಪ್ರಸಂಗದಲ್ಲಿ ಜಿ.ಎಸ್. ಶಿವರುದ್ರಪ್ಪನವರು ಅತ್ಯಂತ ನಿಷ್ಠುರವಾಗಿ ಕೆಲವು ಅಪ್ರಿಯಸತ್ಯಗಳನ್ನು ಅನಾವರಣ ಮಾಡಿದ್ದಾರೆ. ಅದು ಮನನಯೋಗ್ಯವಾಗಿದೆ.

**"ಕುಂಬಾರ ಮಾಳಿಯಲ್ಲಿ ದ್ವಿಜೋತ್ತಮನೊಬ್ಬನಿಗೆ ಹುಟ್ಟಿದವನು ಸರ್ವಜ್ಞ ಎಂಬ ಕತೆಯಲ್ಲಿ ಈ ದೇಶದ ಪ್ರತಿಭೆಯೆಲ್ಲವೂ ಪ್ರತಿಷ್ಠಿತ ವರ್ಣದ ಬೀಜದ ಬೆಳಸು ಎಂಬ ಪರಂಪರಾಗತವಾದ ವರ್ಣಪ್ರತಿಷ್ಠೆಯ ಪ್ರಕ್ಷೇಪ ಇದು ಯಾಕಾಗಿರಬಾರದು ಎಂಬ ಪ್ರಬಲವಾದ ಸಂದೇಹ ನಮಗೆ"**[10] ಎಂಬ ಮಾತುಗಳು ವ್ಯಾಸ, ವಾಲ್ಮೀಕಿ ಮೊದಲಾದ ಪ್ರತಿಭಾಮೇರುಗಳೂ, ವಚನಕಾರರೂ, ಕನಕದಾಸ, ತಿರುವಳ್ಳುವರ್, ಶಿಶುನಾಳ ಶರೀಫ, ಸ್ವಾಮಿ ವಿವೇಕಾನಂದ ಮೊದಲಾದ ಅಸಂಖ್ಯಾತ ಅಬ್ರಾಹ್ಮಣ ಸಮುದಾಯವೇ ಮೇಲಿನ ಗ್ರಹಿಕೆಗೆ ಸಾಕ್ಷಿಗಳಾಗಿವೆ.

ಆದ್ದರಿಂದ ಒಂದು ವಚನದಲ್ಲಿ 'ಸಾಲೆಸರ್ವಜ್ಞ' ಎಂದು ಉಲ್ಲೇಖವಾಗಿರುವುದರಿಂದ ಈ ಜನಪದ ಕವಿ ಕುಂಬಾರಸಾಲೆಯಲ್ಲಿ ಕುಂಬಾರದಂಪತಿಗಳಿಗೆ ಮಗನಾಗಿ ಜನಿಸಿ, ತನ್ನ ಪ್ರತಿಭೆಯಿಂದ, ದೇಶಾಟನದಿಂದ, ಅನುಭವದಿಂದ ಅನುಭಾವದಿಂದ ದಿಗ್‌ದಿಗಂತಗಳನ್ನು ವ್ಯಾಪಿಸಿದ ಎನ್ನಬಹುದು.

ಅವನ ದೇಶದ ಬಗ್ಗೆ ಹೆಚ್ಚು ತಕರಾರು ಇಲ್ಲ. ಕಾಲದ ಬಗ್ಗೆ ವಿಭಿನ್ನ ಅಭಿಪ್ರಾಯಗಳಿವೆ. ಇವನ ದೇಶಕಾಲಗಳ ಬಗ್ಗೆ ಇತರ ಗ್ರಂಥಗಳಲ್ಲಾಗಲೀ, ಶಾಸನಗಳಲ್ಲಾಗಲೀ ಏನೂ ಸೂಚನೆ ದೊರೆಯುವುದಿಲ್ಲ. ಇವನು ಯಾವ ರಾಜಾಶ್ರಯದಲ್ಲೂ ಇಲ್ಲದೆ ಇದ್ದುದರಿಂದ ಅಧಿಕೃತ ದಾಖಲೆಗಳು ಅಲಭ್ಯ. ಅಧಿಕೃತವಲ್ಲವೆಂಬ ಅವನ ಜನ್ಮವೃತ್ತಾಂತವನ್ನು ಕುರಿತ ಅವನ ವಚನಗಳನ್ನು ಮೊರೆಹೊಕ್ಕು, ಅವನ ಹುಟ್ಟು ಬಾಲ್ಯವನ್ನು ಕುರಿತು ಚರ್ಚಿಸಬಹುದು. ಆತ ತನ್ನ ಬಾಲ್ಯವನ್ನು ಧಾರವಾಡ ಸೀಮೆಯಲ್ಲಿ ಕಳೆದಿರಬಹುದಾದರೂ ಜಾನಪದ ಕವಿಯೂ, ಜಂಗಮಕವಿಯೂ ಆದ ಸರ್ವಜ್ಞನ ಕಾರ್ಯಕ್ಷೇತ್ರ ವಿಸ್ತಾರವಾದುದು. ಅದನ್ನು ಇಂತಿಷ್ಟೆ ಎಂದು ಮೊಟಕುಗೊಳಿಸಲಾಗದು. ಅವನು ಕನ್ನಡನಾಡನ್ನೆಲ್ಲ ಪಾದಚಾರಿಯಾಗಿ ಸುತ್ತಿಸುಳಿದು, ಎಲ್ಲ ಮಣ್ಣಿನ ರುಚಿಯನ್ನು, ನೀರನ್ನು, ಗಾಳಿಯನ್ನು ಸೇವಿಸಿದವನು. ಅದಕ್ಕೆ ಅವನ ವಿಪುಲವಾದ ವಚನಗಳೇ ಜೀವಂತ ಸಾಕ್ಷಿ.

ಅವನ ದೇಶ ಅಥವಾ ಪ್ರಾಂತ್ಯ, ಧಾರವಾಡ ಸೀಮೆಯ ಅಂಬಲೂರು (ಮಾಸೂರು) ಎಂದು ವಿದ್ವಾಂಸರೆಲ್ಲರೂ ಒಪ್ಪುತ್ತಾ ಅವನ ಕಾಲದ ಬಗ್ಗೆ ಹೇಳುವುದಾದರೆ ಆತ ನಡುಗನ್ನಡದ ಕವಿ. ವಚನಕಾರರ ದಟ್ಟಪ್ರಭಾವ ಇವನ ಮೇಲಾಗಿರುವುದರಿಂದ ಈತ ವಚನಾಂದೋಲನದ ಅನಂತರದ ಕಾಲಕ್ಕೆ ಸೇರಿದವನು.

"ಹದಿನಾರನೆಯ ಶತಮಾನದಲ್ಲಿ ವಿಜಯನಗರದ ಸಂಪತ್ತು ಹಾಳಾಗಿ, ನಾಡಿನ ಧಾರ್ಮಿಕ ಮತ್ತು ಸಾಮಾಜಿಕ ಪರಿಸ್ಥಿತಿಗಳು ಅಧೋಗತಿಗಿಳಿದಿದ್ದವು. ಮಾನವನು ಪಶುವಿಗಿಂತ ಕಡೆಯಾಗಿ ವರ್ತಿಸತೊಡಗಿದ್ದನು. ಅಂತಹ ಪ್ರತಿಕೂಲವಾದ ಪರಿಸ್ಥಿತಿಯಲ್ಲಿ, ದೇಶವು ಕತ್ತಲೆಯಲ್ಲಿ ಮುಳುಗಿದ್ದಾಗ ಕನ್ನಡ ನಾಡಿನಲ್ಲಿ ಸರ್ವಜ್ಞನು ಉದಯಿಸಿದನು".

ಆರ್.ರೇಣುಕಮ್ಮನವರು ಆಲಂಕಾರಿಕವಾಗಿ ಅವನ ಕಾಲವನ್ನು ಸೂಚಿಸುತ್ತಾರೆ.[೧೧]

ಉತ್ತಂಗಿ ಚನ್ನಪ್ಪನವರು, ತೆಲುಗಿನ ವೇಮನ ಹಾಗೂ ಸರ್ವಜ್ಞರಲ್ಲಿರುವ ಸಾಮ್ಯವನ್ನು ಗುರುತಿಸಿ ಹಾಗೂ ಅವನ ರಾಜನೀತಿ ಪದ್ಧತಿ ವಚನಗಳು ವಿಜಯನಗರದ ಅರಸರ ರಾಜ್ಯಭಾರದಿಂದ ಪ್ರಭಾವಿತವಾಗಿರಬಹುದೆಂದು ಊಹಿಸಿ ಹಾಗೂ ಅವನ ವಚನಗಳಲ್ಲಿ ಸಾಂದರ್ಭಿಕವಾಗಿ ಬಳಕೆಯಾಗಿರುವ ನಾಣ್ಯಗಳ ಹೆಸರುಗಳು, ತಾರ, ಕಾಸು, ಹಾಗ, ಅಡ್ಡ, ಹಣ, ಇಪ್ಪಣ – ಇವು ಬ್ರಿಟಿಷರ ಕಾಲದ ಹಿಂದಿನವು ಎಂದು ತರ್ಕಿಸಿ, ಇವನ ಕಾಲವನ್ನು ೧೬ನೆಯ ಶತಮಾನ ಎನ್ನುತ್ತಾರೆ.

ಎಫ್.ಕಿಟ್ಟೆಲರು ೧೮೦೦ ಎನ್ನಲು ಕಾರಣ ಅವನ ಕಾಲಜ್ಞಾನ ವಚನಗಳಲ್ಲಿ ಸಿಗುವ ರೈಲು, ತಂತಿ, ಬಿಳಿಯರ ಸೂಚನೆ ಇವುಗಳನ್ನು ಗಮನಿಸಿ ಈ ನಿರ್ಧಾರಕ್ಕೆ ಬರುತ್ತಾರೆ. ಆದರೆ ಆ ಎಲ್ಲ ವಚನಗಳು ಪ್ರಕ್ಷಿಪ್ತವೆಂದು ಇತರ ವಿದ್ವಾಂಸರ ದೃಢವಾದ ಅಭಿಪ್ರಾಯ.

ಎಲ್. ಬಸವರಾಜು ಅವರು ತಮಗೆ ಸಿಕ್ಕ ಪ್ರಾಚೀನತಮ ಪ್ರತಿಯೆಂದು ಅವರು ಭಾವಿಸಿದ ಹಸ್ತಪ್ರತಿಯಲ್ಲಿ ವೆಂಕ ಎಂಬ ಪ್ರತಿಕಾರನ ಹೆಸರಿರುವ ಪ್ರತಿಯ ಕಾಲ ೧೬೩೬. ಆದ್ದರಿಂದ ಸರ್ವಜ್ಞನು ಆ ಹಿಂದೆ ಇದ್ದವನು ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

ರಾಮೇಗೌಡರು ಅವರಿಗೆ ದೊರೆತ ಒಂದು ಹಸ್ತಪ್ರತಿಯ ಆಧಾರದಿಂದ ಕ್ರಿ.ಶ. ೧೫೫೦–೧೫೬೦ ಎಂದು ನಿರ್ಧರಿಸುತ್ತಾರೆ.

ಎಚ್.ತಿಪ್ಪೇರುದ್ರಸ್ವಾಮಿಯವರು "ಸರ್ವಜ್ಞನ ಕಾಲವನ್ನು ಸುಮಾರು ೧೫೭೫ ಅಥವಾ ಸ್ಥೂಲವಾಗಿ ೧೬ನೆಯ ಶತಮಾನದ ಉತ್ತರಾರ್ಧ ಎಂದು ಇಟ್ಟುಕೊಳ್ಳಬಹುದು"[೧೨] ಎನ್ನುತ್ತಾರೆ.

ಎಂ. ಚಿದಾನಂದಮೂರ್ತಿಯವರು, ಎಲ್.ಬಸವರಾಜು ಅವರು ಸಂಪಾದಿಸಿದ ಸರ್ವಜ್ಞನ ಸಂಗ್ರಹ, ಪರಮಾರ್ಥದಲ್ಲಿ ಬರುವ ಒಂದು ತ್ರಿಪದಿಯನ್ನು ಉದ್ಧರಿಸಿ,

"ಇಂದ್ರದಲಿ ಆದಿತ್ಯರೊಂದೆಡೆಯವೈತರಲು
ಸಂದಸಂವತ್ಸರನೊಡಗೂಡು–ಶಕವರುಷ
ಮುಂದೆ ಬಂದಿಕ್ಕು ಸರ್ವಜ್ಞ"

ಇಂದ್ರರು ೧೪, ಆದಿತ್ಯರು ೧೨, ಮೇಲೊಂದು ವರ್ಷ ಎಂದರೆ ೧೪೧೩ ಎಂದಾಗುತ್ತದೆ.

"ಆದರೆ ಈ ಕಾಲ ಸರ್ವಜ್ಞನಿಗೆ ಸಂಬಂಧಿಸಿದೆಯೇ?"[೧೩] ಎಂದು ಒಂದು ಪ್ರಶ್ನಾರ್ಥಕ ಚಿಹ್ನೆಯನ್ನು ಇರಿಸಿದ್ದಾರೆ.

ಈ ಎಲ್ಲ ಆಧಾರಗಳನ್ನು ಸಮೀಕ್ಷಿಸಿ, ಸಧ್ಯಕ್ಕೆ ಹೆಚ್ಚಾಗಿ ಎಲ್ಲರೂ ಒಪ್ಪುವ ಕಾಲ ಸುಮಾರು ೧೫೫೦–೬೦. ನನ್ನ ಅಭಿಪ್ರಾಯ ಕೂಡ ಅದೇ ಆಗಿದೆ"[೧೪] ಎಂದು ಬಿ.ಜಿ. ಚನ್ನೇಶ್ ಹೊನ್ನಾಳಿಯವರು ಅಭಿಪ್ರಾಯಪಡುತ್ತಾರೆ.

ಇದು ಈ ಚರ್ಚೆಯಲ್ಲಿ ಭಾಗವಹಿಸಿದ ಎಲ್ಲ ಘನವಿದ್ವಾಂಸರ ಅಭಿಪ್ರಾಯವೂ ಆಗಿರುವುದರಿಂದ ಬೇರೆ ಯಾವುದಾದರೂ ಮೂಲದಿಂದ ಖಚಿತ ಆಧಾರಗಳು ದೊರೆಯುವವರೆಗೆ, ತಾತ್ಕಾಲಿಕವಾಗಿ ಮೇಲಿನ ಕಾಲವನ್ನು ಅಂಗೀಕರಿಸಬಹುದು.

ಸರ್ವಜ್ಞನ ಮತದ ವಿಚಾರವಾಗಿ ಹೇಳುವುದಾದರೆ ಎಲ್ಲೂ ಅವನು ಸ್ಪಷ್ಟವಾಗಿ ತನ್ನ ಮತದ ಬಗ್ಗೆ ಅಥವಾ ಮತಾಂತರದ ಬಗ್ಗೆ ಪ್ರಸ್ತಾಪಿಸಿಲ್ಲ. ಶಿವನ ಬಗ್ಗೆ ವಿಶೇಷ ಒಲವು ಅವನ ವಚನಗಳಲ್ಲಿ ಪರ್ಯಾಯವಾಗಿ ವ್ಯಕ್ತವಾಗಿರುವುದರಿಂದ ಅವನಿಗೆ ಶೈವ ಮತ ಇಷ್ಟವಾದುದು ಎನ್ನಬಹುದು. ಬಸವಾದಿಪ್ರಮಥರ ವಿಚಾರಧಾರೆ, ಆಚರಣೆ, ಕಲ್ಯಾಣದ ಆಂದೋಲನದ ಅರಿವು ಇರುವುದಕ್ಕೆ ಅವನ ಅನೇಕ ವಚನಗಳಲ್ಲಿ ಸಾಕ್ಷಿ ದೊರೆಯುತ್ತದೆ. ಬಸವಾದಿ ವಚನಕಾರರ ದಟ್ಟವಾದ ಪ್ರಭಾವ ಅವನ ಸಾಹಿತ್ಯದ ಮೇಲೆ ಆಗಿದೆ.

"ಒಂದು ದೃಷ್ಟಿಯಿಂದ ಸರ್ವಜ್ಞನೇ ವಚನಕಾರರ ನಿಜವಾದ ಉತ್ತರಾಧಿಕಾರಿ"[೧೫] ಎಂಬ ಹೇಳಿಕೆ ಮನನಯೋಗ್ಯವಾಗಿದೆ; ಸ್ವೀಕಾರಾರ್ಹವಾಗಿದೆ.

ಉತ್ತಂಗಿಯವರ ಸಂಪಾದನೆಯ ಸಂಗ್ರಹದಲ್ಲಿ ಅಷ್ಟಾವರಣ, ಷಟ್‌ಸ್ಥಳಾಚರಣೆ, ಶಿವಯೋಗ ಸಂಬಂಧಿ ವಚನಗಳಿರುವುದನ್ನು ವಿದ್ವಾಂಸರು ಈಗಾಗಲೇ ಗುರುತಿಸಿ ತೋರಿಸಿದ್ದಾರೆ.

"ಗುರುವ ನರನೆಂದವಗೆ ಹರನ ಶಿಲೆಯೆಂದವಗೆ
ಶರಣಪ್ರಸಾದವೆಂಜಲೆಂದವಗೆ
ನರಕ ತಪ್ಪುವುದೇ? ಸರ್ವಜ್ಞ"

ಈ ವಚನವನ್ನು ಆಧರಿಸಿ, ಸರ್ವಜ್ಞನಿಗೆ ಗುರುಮುಖೇನ ದೀಕ್ಷೆಯಾಗಿರಬೇಕು; ಪ್ರಸಾದವನ್ನು ಸ್ವೀಕರಿಸಿದ್ದಾನೆ ಎಂದು ನಿರ್ಣಯಿಸಲಡ್ಡಿಯಿಲ್ಲ.

ಆತನ ದೀಕ್ಷಾಗುರು ಯಾರು? ಸರ್ವಜ್ಞನಿಗೆ ಸಂಬಂಧಿಸಿದ ಅನೇಕ ಪ್ರಶ್ನೆಗಳಿಗೆ ಮೌನವೇ ಉತ್ತರವಾದಂತೆ ಇದಕ್ಕೂ ಅಷ್ಟೆ. ಆದರೆ ವಿದ್ವಾಂಸರಾದ ಬಿ.ಕೆ. ಹೊಸಮಠ ಅವರು "ಬಹುಶಃ ಸೋಮಶೇಖರ ಗುರುವಿನಿಂದ ದೀಕ್ಷೆ ಪಡೆದು ವಿರಕ್ತಾಶ್ರಮವನ್ನು ಹೊಂದಿದ್ದರೂ ಹೊಂದಿರಬಹುದು"[೧೬] ಎಂದು ಅಭಿಪ್ರಾಯಿಸಿದ್ದಾರೆ.

ವಾರಣಾಸಿಯ ಹೋಹಕಾರಣವೇಕಯ್ಯಾ
ಕಾರಣಾತ್ಮಕನು ಕರದೊಳಗಿಯಿರುತಿರಲು
ನೀರಹೋಗಲೇಕಯ್ಯ ಸರ್ವಜ್ಞ

ಇಷ್ಟಲಿಂಗದ ಪ್ರಸ್ತಾಪ ಇಲ್ಲಿ ಸ್ಪಷ್ಟವಾಗಿಯೇ ಬಂದಿದೆ. ಅಲ್ಲದೆ ಅದರ ಬಗ್ಗೆ ಅಪಾರ ಗೌರವವೂ, ಶ್ರದ್ಧೆಯೂ ವ್ಯಕ್ತವಾಗಿದೆ.

ಷಡಕ್ಷರಿಯ ಮಂತ್ರಮಹಿಮೆಯನ್ನು ಪುರಸ್ಕರಿಸುವ ಈ ಕೆಳಗಿನ ವಚನವನ್ನು ನೋಡೋಣ:

ಅಕ್ಕರವು ಲೆಕ್ಕಕ್ಕೆ ತರ್ಕಕ್ಕೆ ಗಣಿತಕ್ಕೆ;
ಮಿಕ್ಕ ಓದುಗಳು ತಿರುಪೆಗೆ ಮೋಕ್ಷಕ್ಕಾ
ರಕ್ಷರವೇ ಸಾಕು ಸರ್ವಜ್ಞ

ಷಡಕ್ಷರಿ ಮಂತ್ರ ಮಿಕ್ಕ ಎಲ್ಲ ಓದು, ಜ್ಞಾನಗಳಿಗಿಂತ ಮಿಗಿಲಾದುದು ಎಂಬುದನ್ನು ಸಾರಿ ಹೇಳಿದ್ದಾನೆ.

ಮುಂದಿನ ವಚನದಲ್ಲಿ ಶಿವದಾರ(ಇಷ್ಟಲಿಂಗಧಾರಣೆ)ದ ಬಗ್ಗೆ ಪ್ರಸ್ತಾಪವಿದೆ.

ಲಜ್ಜೆ ನಾಚಿಕೆ ತೊರೆದು ಗುಜ್ಜತನವಳವಟ್ಟು
ಸಜ್ಜೆಶಿವದಾರ ಧರಿಸಿಪ್ಪ ಶರಣರ
ಹೆಜ್ಜೆಯೊಳಗಿರಿಸು ಸರ್ವಜ್ಞ

ಈ ವಚನದಲ್ಲಿರುವ ಸಜ್ಜೆ, ಶಿವದಾರ, ಶರಣ – ಒಂದೊಂದು ಶಬ್ಧಗಳು, ವೀರಶೈವರ ಆವರಣದಲ್ಲಿ ಕಂಗೊಳಿಸುವ ನೈಜಮಂತ್ರಗಳಾಗಿವೆ.

ಮುಂದಿನ ವಚನದಲ್ಲಿ ಶಿವಲಿಂಗಧಾರಣೆಯ ಮಹತ್ತ್ವ, ಅದರ ವಿಧಿಯ ಬಗ್ಗೆ ನಿಷ್ಠೆ ವ್ಯಕ್ತವಾಗಿದೆ.

ಲಿಂಗವಿರಹಿತನಾಗಿ ನುಂಗದಿರು ಏನುವನು
ತಿಂಗಳಲಿ ಸತ್ತ ಕೊಳೆನಾಯ ಮಾಂಸವ
ನುಂಗಿದಂತಕ್ಕು ಸರ್ವಜ್ಞ

ಇಷ್ಟಲಿಂಗಧಾರಣೆ, ಅದು ನಷ್ಟವಾದಲ್ಲಿ ಅನುಸರಿಸಬೇಕಾದ ಕ್ರಮ, ಇವುಗಳ ಬಗ್ಗೆ ಬಸವಾದಿ ಶರಣರ ಕಾಲದಲ್ಲಿ ವಿಪುಲ ಚರ್ಚೆಯಾಗಿದೆ. ಲಿಂಗನಷ್ಟವಾದರೆ ಮತ್ತೊಂದು ಲಿಂಗವನ್ನು ಧರಿಸಬಹುದೇ? ಎಂಬುದು ಸಹ

ದೀರ್ಘವಾಗಿ ಚರ್ಚೆಯಾಗಿದೆ. ಆ ಬೆಳಕಿನಲ್ಲಿ ಇಲ್ಲಿನ ಲಿಂಗರಾಹಿತ್ಯ ಸ್ಥಿತಿಯ ಬಗ್ಗೆ ಸರ್ವಜ್ಞನ ಗ್ರಹಿಕೆಗಳು ಮಹತ್ತ್ವದ್ದಾಗಿದೆ.

ಸರ್ವಜ್ಞನ ವಚನಭಂಡಾರದಲ್ಲಿ ಶರಣರ ನಡೆನುಡಿಯ ಬಗ್ಗೆ ಪ್ರಾಸಂಗಿಕವಾಗಿ ಅನೇಕ ಪ್ರಸ್ತಾಪವಿದೆ:

ಗಂಗೆಯ ತಡಿ ಲೇಸು, ಮಂಗಳನ ಬಲ ಲೇಸು
ಜಂಗಮ ಭಕ್ತರ ನಡೆ ಲೇಸು, ಶರಣರ
ಸಂಗವೇ ಲೇಸು ಸರ್ವಜ್ಞ

ಮುಂದಿನ ವಚನದಲ್ಲಿ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳು ಒಂದೇ ಆಗಿ ಪರಿಣಮಿಸಿರುವ ಬಗ್ಗೆ ತಿಳಿಸಿದ್ದಾನೆ.

ಸೃಷ್ಟಿಯಲ್ಲಿವ ಮನವ ಮುಟ್ಟುವುದು ನಿಮಿಷಕೆ
ನೆಟ್ಟು ಭಾವ ಜೀವ ಇಷ್ಟ ಮೂರೊಂದೆಂದು
ನಿಷ್ಠಿಪನೇ ಶ್ರೇಷ್ಠ ಸರ್ವಜ್ಞ

ಅವು ಮೂರೂ ಬೇರೆ ಬೇರೆ ಅಲ್ಲ; ಒಂದರಲ್ಲಿ ಸಂಗಮಿಸಿದೆ. ಅವಿನಾಭಾವವಿದೆ ಎಂಬುದೇ ಈ ವಚನದ ತಾತ್ಪರ್ಯ.

ವಿಭೂತಿಧಾರಣೆಯ ಬಗ್ಗೆಯೂ ಸರ್ವಜ್ಞನ ಗಮನ ಹರಿದಿದೆ; ಅದರ ಮಹಿಮೆಯನ್ನು ಕಂಡಿದ್ದಾನೆ.

ಲಿಂಗದ ಮೈವೆಳಗು, ಮಂಗಳದ ಚಿದ್ಭಸ್ಮ
ಹಿಂಗದೆಯದನು ಧರಿಸಿದವ ಶಿವಚಿ
ದಂಗವಾಗಿಕ್ಕು ಸರ್ವಜ್ಞ

ರುದ್ರಾಕ್ಷಿಯ ಮಹಿಮೆ ಈ ವಚನದಲ್ಲಿ ಬಂದಿದೆ:

ರುದ್ರನಕ್ಷಿಯ ಮಣಿಯ ಹೊದ್ದಿ ಧರಿಸಿಪ್ಪವಗೆ
ಹೊದ್ದವು ಪಾಪ ಭವಮಾಲೆ ಸಾಕ್ಷಾತು
ರುದ್ರನೆಯಕ್ಕು ಸರ್ವಜ್ಞ

ಪ್ರಣವಮಂತ್ರದ ಪ್ರಸ್ತಾಪ ಮುಂದಿನ ವಚನದಲ್ಲಿದೆ.

ಪ್ರಣವ ಪಂಚಾಕ್ಷರಿಯ ತ್ರಿಣಯ ತಾನೆಂದರಿತು
ಪ್ರಣಯದಿ ಸ್ಮರಿಸಿ ಜತಿಸುತಿರಲಾತನ
ಗ್ರಣಿ ತ್ರಿಣಯನು ತಾನೆ ಸರ್ವಜ್ಞ

ಸಾಂದರ್ಭಿಕವಾಗಿ ಪಾದೋದಕ, ಪ್ರಸಾದಗಳ ಬಗ್ಗೆಯೂ ಸರ್ವಜ್ಞನು ತನ್ನ ವಚನಗಳಲ್ಲಿ ಪ್ರಸ್ತಾಪಿಸಿದ್ದಾನೆ. ಆದ್ದರಿಂದ ಆತ ಶಿವಭಕ್ತ ಮಾತ್ರವಲ್ಲ; ಲಿಂಗದೀಕ್ಷೆ ಪಡೆದ ವೀರಶೈವ ಎಂದು

ಭಾವಿಸುವುದರಲ್ಲಿ ಏನೂ ತೊಡಕಿಲ್ಲ. ಅಷ್ಟಾವರಣದ ಪ್ರಸ್ತಾಪ ಸರ್ವಜ್ಞನ ವಚನಗಳಲ್ಲಿ ಪ್ರಾಸಂಗಿಕವಾಗಿ ಬಂದಿದೆ. ಆದರೆ ವೀರಶೈವವು ಅವನಿಗೆ ಒಂದು ಉಪಾದಿ ಇರಬಹುದು ಅಥವಾ ಅವಸ್ಥೆಯಿರಬಹುದು. ಅದರಾಚೆ ಆತ ನಿಲುಕುತ್ತಾನೆ; ಎಲ್ಲ ಬಂಧನಗಳಿಂದ, ಆವರಣಗಳಿಂದ ಬಿಡುಗಡೆಯನ್ನು ಪಡೆಯುವ ಕ್ರಾಂತಿಕಾರಕ ಚೇತನ; ಸದಾ ಸಂಚಾರಿ, ಜಂಗಮ, ಅವನನ್ನು ಮತೀಯ ಚೌಕಟ್ಟಿನಲ್ಲಿ ಬಂಧಿಸಿಡುವುದು ಕಷ್ಟ. "......... ಇವನು ಸ್ವತಂತ್ರವಿಚಾರಿಯೂ, ಸ್ವಚ್ಛಂದ ವೃತ್ತಿಯುಳ್ಳವನೂ ಆದ್ದರಿಂದ ಲಿಂಗ, ರುದ್ರಾಕ್ಷಿ, ವಿಭೂತಿ ಮೊದಲಾದವುಗಳನ್ನು ಈಡಾಡಿರಬಹುದು" ಎಂದು ಉತ್ತಂಗಿಯವರು ಬರೆದು ಸಂಪ್ರದಾಯನಿಷ್ಠರನ್ನು ಕೆರಳಿಸಿದ್ದಾರೆ. ಮತೀಯ ವಿಚಾರಗಳು ಸೂಕ್ಷ್ಮವಾದ್ದರಿಂದ ಅವುಗಳನ್ನು ಮುಟ್ಟದೇ ಇರುವುದು ಕ್ಷೇಮ.

ದ.ರಾ.ಬೇಂದ್ರೆಯವರು ಪ್ರಾಸಂಗಿಕವಾಗಿ ಸರ್ವಜ್ಞನ ಬಗ್ಗೆ ನುಡಿದ ಮಾತು ಅರ್ಥಗರ್ಭಿತವಾಗಿದೆ; ವಿಚಾರಾರ್ಹವಾಗಿದೆ.

'ಅವನ ಜಾತಿ ಮಾನವ ಜಾತಿ, ಅವನ ಮತ ದೇವಮತ, ಅವನ ಕಾಲ ಸರ್ವ ಕಾಲ"[೧೭]

ಅವನ ವಿಶಾಲ ಮನೋಧರ್ಮ, ಮುಕ್ತ ವಿಚಾರಧಾರೆಗೆ ಎಲ್ಲ ಕಾಲಕ್ಕೂ ಈ ಕೆಳಗಿನ ವಚನ ಶಿಲಾನಿಕ್ಷಿಪ್ತಾಕ್ಷರವಾಗಿ ಉಳಿದಿದೆ.

"ಕೊಲುವ ಧರ್ಮವನೊಯ್ದು ಒಲೆಯೊಳಗೆ ಇಕ್ಕುವ;
ಕೊಲಲಾಗದೆಂಬ ಜೈನನಮತವೆನ್ನ
ತಲೆಯ ಮೇಲಿರಲಿ ಸರ್ವಜ್ಞ"

ಇಂಥ ಮಹಾಚೇತನವನ್ನು ಒಂದು ಮತೀಯ – ಅದು ಎಷ್ಟೇ ಉದಾತ್ತವಿರಲಿ – ಆವರಣದಲ್ಲಿ ಬಂಧಿಸುವುದು ಎಷ್ಟು ಸೂಕ್ತ?

## ವಿದ್ಯಾಭ್ಯಾಸ, ಶಿಕ್ಷಣ, ಗುರುಪರಂಪರೆ? ಮತ್ತೆ ದೊಡ್ಡ ಪ್ರಶ್ನೆಯೇ?

ಕನ್ನಡ ಕವಿಚರಿತೆ ಅಥವಾ ಸಾಹಿತ್ಯ ಚರಿತ್ರೆಯನ್ನು ಅಧ್ಯಯನ ಮಾಡುವಾಗ ನಮಗೆ ಅ–ಪೂರ್ವವಾಗಿ ಕವಿಗಳ ಸ್ವಂತ ವಿವರಗಳು ದೊರೆಯುತ್ತವೆ. ಅವನೊಬ್ಬ ಮಹಾಕವಿಯಾಗಿದ್ದರೆ ಅವನ ಶಿಷ್ಯರು ಅವನ ಬಗ್ಗೆ ತಿಳಿಸುತ್ತಾರೆ. ಈ ವಿಚಾರದಲ್ಲಿ ಪಂಪ, ಪೊನ್ನ, ರನ್ನರಂತಹ ಆದಿಕಾಲದ ಜೈನಕವಿಗಳ ಬಗ್ಗೆ ದೊರೆಯುವಷ್ಟು ಮಾಹಿತಿ ಇತರರ ಬಗ್ಗೆ ದೊರೆಯುವುದಿಲ್ಲ.

ಕುಮಾರವ್ಯಾಸನಂಥ ಮಹಾಕವಿಯ ಬಗ್ಗೆ ದೊರೆಯುವುದು ಅಲ್ಪಮಾಹಿತಿಯೇ. ಇತರ ಆಧಾರಗಳನ್ನು ಪರಾಮರ್ಶಿಸಿ ಅವನ ಕಾಲದೇಶಗಳನ್ನು ಊಹಿಸಬೇಕಾಗಿದೆ.

ಅವನ ರೂಪು, ವೇಷಭೂಷಣಗಳು? ನಮ್ಮ ಯಾವ ಕವಿಯ ಭಾವಚಿತ್ರವೂ, ರೇಖಾಚಿತ್ರವೂ, ನುಡಿಚಿತ್ರವೂ ದೊರೆಯುವುದಿಲ್ಲ (ಇದ್ದುದರಲ್ಲಿ ಪಂಪನೇ ವಾಸಿ, ತನ್ನ ಆಕಾರ, ಬಣ್ಣ, ಅಭಿರುಚಿಗಳ ಬಗ್ಗೆ ತಾನೇ ಬರೆದುಕೊಂಡಿದ್ದಾನೆ). ಅವರ ಕಾವ್ಯದ ಆಧಾರದಿಂದ ಕಲ್ಪಿಸಿಕೊಂಡ ಭಾವಚಿತ್ರವೇ ನಮಗೆ ಗತಿ.

ಸರ್ವಜ್ಞನೇ ವಾಸಿ, ತನ್ನ ವೇಷಭೂಷಣಗಳ ಒಂದು ಸ್ಥೂಲ ಚಿತ್ರವನ್ನು ಒದಗಿಸಿದ್ದಾನೆ.

ಮಂಡೆ ಬೋಳಿಸಿಕೊಂಡು, ತುಂಡುಗಂಬಳಿ ಹೊದೆದು
ಹಿಂಡನಗಲಿದ ಗಜದಂತೆ ಇಪ್ಪವರ
ಕಂಡು ನಂಬುವುದು ಸರ್ವಜ್ಞ

ಕರದಿ ಕಪ್ಪರವುಂಟು ಹಿರಿದೊಂದು ನಾಡುಂಟು
ಹರನೆಂಬ ದೈವ ನಮಗುಂಟು, ತಿರಿವರಿಂ
ಸಿರಿವಂತರಾರು ಸರ್ವಜ್ಞ

ಇದು ಮೇಲುನೋಟಕ್ಕೆ ಅವನ ಬಾಹ್ಯಾಕಾರದ ಚಿತ್ರದಂತೆ ಕಂಡರೂ, ಸೂಕ್ಷ್ಮಾವಲೋಕನಕ್ಕೆ ಅವನ ಆಂತರಿಕ ವ್ಯಕ್ತಿತ್ವದ ರೇಖಾಚಿತ್ರವೂ ಮೂಡುತ್ತದೆ.

ತಲೆ ಮುಂಡನವಾಗಿದೆ; ವಿಶೇಷ ವೇಷಭೂಷಣಗಳಿಲ್ಲ; ಒಂದು ತುಂಡುಗಂಬಳಿ, ಕೌಪೀನ ಎಂಬುದು ಅಧ್ಯಾಹಾರ, ಕೈಯಲ್ಲಿ ಭಿಕ್ಷಾಪಾತ್ರೆ. ಆದ್ದರಿಂದ ಅವನು ಆರಿಸಿಕೊಂಡದ್ದು ಭೋಗಜೀವನವಲ್ಲ; ತ್ಯಾಗ ಜೀವನವನ್ನು. ಕನಿಷ್ಠ ಜೀವನಾವಶ್ಯಕ ವಸ್ತುಗಳೆಂದರೆ ಇಷ್ಟೆ. 'ಸಂನ್ಯಾಸ' ಭಾರತೀಯ ಪರಂಪರೆಯಲ್ಲಿ ಒಂದು ಮಾನ್ಯ, ಗಣ್ಯ ಆಶ್ರಮ.

ಇಷ್ಟಾದ ಮೇಲೆ ಆ ಬದುಕಿನಲ್ಲಿ ನಿಷ್ಠೆ ಇರಬೇಕು, ಛಲವಿರಬೇಕು; ಯಾರನ್ನೂ ಎದುರಿಸುವ ತತ್ತ್ವನಿಷ್ಠೆ ಇರಬೇಕು. ಲೋಕದ ಸ್ತುತಿನಿಂದೆಗಳಿಗೆ ಬೆದರದ, ಅಂಜದ ಗಟ್ಟಿ ಮನಸ್ಥಿತಿ, ಸಂಕಲ್ಪ ಇರಬೇಕು. ಇದು ಅವನಲ್ಲಿ ಯಥೇಚ್ಛ ಇದೆ. "ಹಿರಿದೊಂದು ನಾಡುಂಟು" ಎಂಬ ಅಚಲ ವಿಶ್ವಾಸದಲ್ಲಿ, "ಪ್ರಪಂಚ ವಿಸ್ತಾರವಾಗಿದೆ, ಇಲ್ಲಿ ಸಿಕ್ಕದಿದ್ದರೆ, ಅಸನ ಮತ್ತೊಂದೆಡೆ, ಇನ್ನೊಂದೆಡೆ, ಅನಂತಾವಕಾಶಗಳಿವೆ ಎಂಬ ನೆಚ್ಚು. 'ಹರನೆಂಬ ದೈವವುಂಟು' ಎಂಬಲ್ಲಿ ಇಷ್ಟದೈವದಲ್ಲಿ ಇರುವ ಅಚಲ ವಿಶ್ವಾಸ, ಶ್ರದ್ಧೆ. ಅದು ಜೀವನದ ಏಳುಬೀಳುಗಳಿಗೆ, ತಲ್ಲಣಗಳಿಗೆ, ನೋವುನಿಂದೆಗಳಿಗೆ ಭರವಸೆ, ಲಕ್ಷ್ಯ, ಯಾವ ಹಂಗೂ, ಯಾರ ಹಂಗೂ ಇಲ್ಲದೆ – ಏಕೆಂದರೆ ಕನಿಷ್ಠ ನಿರೀಕ್ಷೆ, ಬಯಕೆ, ಅಪೇಕ್ಷೆ – ತಿರಿವವರೇ ಸಿರಿವಂತರು.

ರಾಜನಿಗೆ, ಧನಿಕನಿಗೆ ಆಕ್ರಮಣದ, ದರೋಡೆಯ, ನಷ್ಟದ, ಕ್ಷಾಮಡಾಮರಗಳ, ಪ್ರಕೃತಿವಿಕೋಪಗಳ ಪರಿಣಾಮದ ಭಯ ಸದಾ ಬೆನ್ನಟ್ಟಿರುತ್ತದೆ. ಪ್ರವಾಹ, ಭೂಕಂಪಗಳಂಥ ಪ್ರಾಕೃತಿಕ ಕ್ಷೋಭೆಗಳು ನಾಡನ್ನು

ಕಾಡಾಗಿ, ಬೆಂಗಾಡಾಗಿ, ಸ್ಮಶಾನವಾಗಿ ಕ್ಷಣಮಾತ್ರದಲ್ಲಿ ಬದಲಾಯಿಸಿಬಿಡಬಹುದು. ಭಿಕ್ಷಾಪಾತ್ರೆ ಹಿಡಿದ ಧೀರ ಸನ್ಯಾಸಿ ಗಟ್ಟಿಬಂಡೆಯಂತೆ ನಿಂತಿರುತ್ತಾನೆ, ಮತ್ತೆ ನದಿಯಂತೆ ಹರಿಯುತ್ತಾನೆ.

"ಹಿಂಡನಗಲಿದ ಗಜದಂತೆ" ಎಂಬ ಉಪಮಾನವಂತೂ ಅತ್ಯದ್ಭುತವಾಗಿದೆ. ಮಹಾಕವಿಗಳ ಕಾವ್ಯಗಳಲ್ಲೂ ಇಂಥ ಧ್ವನಿಪೂರ್ಣ ಉಪಮೆ ಸಿಗಲಾರದು.

ಈ ಒಂದು ಉಪಮೆ ಅವನ ಆಂತರಿಕ ವ್ಯಕ್ತಿತ್ವವನ್ನು ಜಗ್ಗನೆ ಬೆಳಗಿಸುತ್ತದೆ. ಹಿಂಡಿನಲ್ಲಿರುವ ಗಜಕ್ಕೆ ತನ್ನ ಅಪಾರಶಕ್ತಿಯ ಅರಿವಿದ್ದರೂ, ಅದು ಗುಂಪಿನಿಂದ, ಗುಂಪಿನ ನಾಯಕನಿಂದ ನಿಯಂತ್ರಿತ. ಆದರೆ ಹಿಂಡನಗಲಿದ ಗಜದ ಶಕ್ತಿ, ಮನೋಧರ್ಮ, ಇಚ್ಛೆ, ಲಹರಿ ಎಲ್ಲ ಸ್ವತಂತ್ರ. ಅದು ಯಾರಿಗೂ ಬಗ್ಗಬೇಕಾಗಿಲ್ಲ, ಅಂಜಬೇಕಾಗಿಲ್ಲ, ಇದು ಸರ್ವಜ್ಞನ ಆಂತರಿಕೆ ವ್ಯಕ್ತಿತ್ವದ ನಿಶ್ಶಂಖಲಾವೃತ್ತಿಗೆ ಎತ್ತರದ ಪ್ರತಿಮೆಯಾಗಿದೆ. ಯಾವುದಾದರೂ ಒಂದು ಚಳವಳಿಯ, ಆಂದೋಲನದ ಭಾಗವಾದರೆ, ಅಲ್ಲಿ ವ್ಯವಸ್ಥೆಯ ಕಟ್ಟುಪಾಡು, ನಿಯಂತ್ರಣಗಳಿರುತ್ತವೆ. ಸತ್ಯದೊಡನೆ ಸಾಂಸ್ಥಿಕ ಶಿಸ್ತಿಗಾಗಿ ರಾಜಿ ಮಾಡಿಕೊಳ್ಳಬೇಕಾಗುತ್ತದೆ. ಆದರೆ ಈ ಹಿಂಡನಗಲಿದ ಗಜಕ್ಕೆ ಯಾರ ಹಂಗೂ ಇಲ್ಲ, ನಿಯಂತ್ರಣವೂ ಇಲ್ಲ. ಕಠೋರ ಸತ್ಯವನ್ನು, ಅಪ್ರಿಯ ಸತ್ಯವನ್ನು ಬಯಲು ಮಾಡುವ, ಅಡೆತಡೆಗಳನ್ನು ಕುಟ್ಟಿ ಪುಡಿ ಮಾಡುವ ಭೀಮಶಕ್ತಿ ತನ್ನ ಕರದಲ್ಲಿ, ಪಾದಚತುಷ್ಟಿಯಲ್ಲಿದೆ ಎಂಬ ಸೂಚನೆ ಇರುವಂತಿದೆ.

ಈ ಹಿಂಡನಗಲಿದ ಗಜಗುಣವೇ ಅವನ ಅವಧೂತಸ್ಥಿತಿಗೆ ಕಾರಣವಾಗಿದೆ, ಮತನಿರಪೇಕ್ಷದ (ಜಾತ್ಯಾತೀತ) ಆಲೋಚನಾಲಹರಿಗಳಿಗೆ, ಮುಕ್ತಚಿಂತನೆಗಳಿಗೆ ಅಡಿಗಲ್ಲಾಗಿದೆ. ರಾಜಾಶ್ರಯದ ದಾಕ್ಷಿಣ್ಯ, ತನ್ನ ಹುಟ್ಟಿದ ಪರಿಸರದ, ತಾನು ನೆಚ್ಚಿದ ಮತದ ಒತ್ತಡ, ಪ್ರಭಾವ, ಪುರಾಣದ, ಶಾಸ್ತ್ರ ಸಮುಚ್ಚಯದ ಆದಮ್ಯ ಹಿಡಿತ ಎಲ್ಲದರಿಂದಲೂ ಬಿಡಿಸಿಕೊಳ್ಳುವ ಮನದಾಶೆ ಫಲಿಸಿದೆ ಅವನಿಗೆ. ಹಿಂಡನಗಲಿದ ಗಜವು ಮತ್ತೆ ಹಿಡಿವಡೆದು, ಸರಪಣಿಯಿಂದ ಬಂಧಿತವಾಗಿ, ಮಾವುತನ ಅಂಕುಶಕ್ಕೆ ಅಂಜುವ ಪ್ರಮೇಯ ಬರಬಾರದೆಂದಿಲ್ಲ.

ಆದರೆ ಹಿಂಡನಗಲಿದ ಗಜ ಯಾವ ಉಪಾದಿಗೂ ಸಿಗಲಿಲ್ಲ; ಆನೆ ನಡೆದದ್ದೇ ಹಾದಿ. ಅವನ ಸಾಹಿತ್ಯ ರಾಶಿಯನ್ನು ಅವಲೋಕಿಸಿದರೆ, ಈ ನಿರ್ಭೀತ ಮನಸ್ಕತೆ, ಮುಕ್ತ ವಿಚಾರಧಾರೆ, ಲೌಕಿಕ–ಪಾರಲೌಕಿಕ, ಆದರ್ಶ–ಶಿಷ್ಟ ಎಂಬ ಯಾವ ಸೀಮಾರೇಖೆಯನ್ನೂ ಮನ್ನಿಸದೆ, ಲೋಕಹಿತವನ್ನು ಮಾತ್ರ ಸಾಧಿಸುವ, ಬಹುಜನಪರವಾದ, ಸಮಾಜಮುಖಿಯಾದ ಚಿಂತನ, ಸಮಾಜದ ಎಲ್ಲ ವರ್ಗದ, ಸ್ತರದ ಜೀವನವನ್ನು ಮುಟ್ಟುವ, ತಟ್ಟುವ, ಪುಲಕಿಸುವ ತವಕ ಅಲ್ಲಿರುವಂತಿದೆ. ಈ ದೃಷ್ಟಿಯಿಂದ ಅವನ ವ್ಯಕ್ತಿತ್ವ ಇಡೀ ಕನ್ನಡ ಸಾಹಿತ್ಯದಲ್ಲೇ ಏಕೈಕ, ಅನನ್ಯ, ಅಸಮ.

ಇಂಥ ಒಂದು ಜೀವನ ಮೀಮಾಂಸೆ, ಮುಕ್ತ ವಿಚಾರಧಾರೆ, ವೈದಿಕ ಪರಂಪರೆಯನ್ನು ಶೋಧಿಸಿ, ಸಾರವನ್ನು ಗ್ರಹಿಸುವ ಕೆಚ್ಚು ಅವನಿಗೆ ಬಂದದ್ದಾದರೂ ಹೇಗೆ?

ಅವನ ಬೆನ್ನಿಗೆ ಅಪಾರವಾದ ವಚನ ಸಾಹಿತ್ಯದ ಗಣಿ ಇದೆ; ರಸಧ್ವನಿ ಇದೆ. ಆದರಿಂದ ಅವನು ವಿಶೇಷವಾಗಿ ಶಕ್ತಿಯನ್ನೂ, ಸ್ಫೂರ್ತಿಯನ್ನೂ ಪಡೆದಿದ್ದಾನೆ. ಶರಣರ ಚಿಂತಾರತ್ನವನ್ನು ದೋಚಿದ್ದಾನೆ. ಅವರ ನುಡಿಸಿರಿಯನ್ನು ಸೂರೆ ಮಾಡಿದ್ದಾನೆ.

ಇದೋ ನೋಡಿ. ಮೊದಲಿಗೆ ಆದ್ಯವಚನಕಾರನೆಂದು ಖ್ಯಾತನೂ, ಪೂಜ್ಯನೂ ಆಗಿರುವ ದೇವರ ದಾಸಿಮಯ್ಯನ ಪ್ರಭಾವವನ್ನು ಸಾಧಾರವಾಗಿ ಗುರುತಿಸೋಣ:

ನಾನೊಂದು ಸುರಿಗೆಯನೇನೆಂದು ಹಿಡಿದೆನು
ಏನತ್ತಿತ್ತೇನನಿಱುವೆನು ಜಗವೆಲ್ಲ
ನಿನಾಗಿಪ್ಪೆ ರಾಮನಾಥಾ

- ಎನ್ನುವ ಈ ವಚನ ಸರ್ವಜ್ಞನಲ್ಲಿ ಹೆಚ್ಚು ಕಡಿಮೆ ಹಾಗೆಯೇ ಇಳಿದಿದೆ.

ಆನೊಂದು ಕೈದುವೆನು ಏನೆಂದು ಹಿಡಿದೆನು
ಏನ ಬಿಟ್ಟೇನನ್ನಿಡುವೆನು ಜಗವೆಲ್ಲ
ತಾನಾದ ಬಳಿಕ ಸರ್ವಜ್ಞ

ದೇವರ ದಾಸಿಮಯ್ಯನ ಪ್ರಸಿದ್ಧವಾದ ವಚನ ಇದು.

ಎತ್ತಪ್ಪೆಶರಣಂಗೆ ತೊತ್ತಪ್ಪ ಶರಣಂಗೆ
ಭೃತ್ಯನಾಗಿ ಸದ್ಭಕ್ತರ ಬಾಗಿಲ ಕಾಯ್ದಿಪ್ಪ ಸೊಣಗನಪ್ಪೆ
ಕರ್ತಾರ, ನಿನಗೆ ಕರವೆತ್ತಿ ಪೊಡಮಡುವ ಭಕ್ತರಮನೆಯ
ಹಿತ್ತಲ ಬೇಲಿಯಾಗಿಪ್ಪನ್ಯೆ ರಾಮನಾಥಾ

ಈ ಸಾಲುಗಳ ವಚನವನ್ನು ಸರ್ವಜ್ಞನು ತನ್ನ ತ್ರಿಪದಿಯಲ್ಲಿ ಹಾಗೆಯೇ ಸಂಗ್ರಹಿಸಿ ಇಳಿಸಿದ್ದಾನೆ.

ಎತ್ತಾಗಿ ತೊತ್ತಾಗಿ ಹಿತ್ತಲದ ಗಿಡವಾಗಿ
ಮತ್ತೆಪಾದದ ಕೆರವಾಗಿ ಗುರುವಿನ
ಹತ್ತಿಲಿರು ಎಂದ ಸರ್ವಜ್ಞ

ಇದು ದಿಕ್ಸೂಚಿಯಾಗಿ ಮಾತ್ರ. ಇನ್ನೂ ಅನೇಕ ವಚನಗಳನ್ನು ಹೆಕ್ಕಿಕೊಡಬಹುದು.

ಇತರ ವಚನಕಾರರ ಪ್ರಭಾವ ಸರ್ವಜ್ಞನ ಮೇಲೆ ದಟ್ಟವಾಗಿಯೇ ಆಗಿದೆ. ಅಲ್ಲಮಪ್ರಭುವಿನ ವಚನ ಭಾಗ 'ವೆಂಟಗಂದೆಯ ಮೇಲೆ ಉಗುರು ಬಿದ್ದಂತಾಯಿತ್ತು' ಎಂಬುದು, ಸರ್ವಜ್ಞನ ವಚನದಲ್ಲಿ ಹೆಚ್ಚು ವ್ಯತ್ಯಾಸವಿಲ್ಲದೆ 'ತಿಂದ ಗಂದೆಯ ಮೇಲೆ ಒಂದುಗುರು ಬೀಳ್ವಂತೆ' ಎಂದಾಗಿದೆ.

ಅಂಬಿಗರ ಚೌಡಯ್ಯನ ಸುಪ್ರಸಿದ್ಧ ವಚನ ಇದು.

ಕಟ್ಟಿದ ಲಿಂಗವ ಬಿಟ್ಟು ಬೆಟ್ಟದ ಲಿಂಗಕ್ಕೆ ಹೋಗಿ
ಹೊಟ್ಟಡಿಯಾಗಿ ಬೀಳುವ ಲೊಟ್ಟಲೊಳನ
ಮೆಟ್ಟಿದ್ದ ಎಡಪಾದರಕ್ಷೆಯ ತಗೊಂಡು
ಲಟಪಟನೆ ಹೊಡೆ ಎಂದಾತ ನಮ್ಮ ಅಂಬಿಗರ ಚೌಡಯ್ಯ

ಇದು ಸಾರಸಂಗ್ರಹವಾಗಿ ಸರ್ವಜ್ಞನಲ್ಲಿ ಹೀಗೆ ರೂಪಾಂತರಗೊಂಡಿದೆ.

ನೆಟ್ಟಿರ್ದ ಕಲ್ಲಿಂಗೆ ಒಟ್ಟಿರ್ದ ಮಣ್ಣಿಂಗೆ
ಕಟ್ಟಿರ್ದ ಲಿಂಗದಡಿಯಾಗಿ ಬೀಳುವನಿ
ಗಿಷ್ಟವೆಲ್ಲಿಯದು ಸರ್ವಜ್ಞ

ಬಸವಣ್ಣನವರನ್ನಂತೂ ಸರ್ವಜ್ಞನು ಮುಕ್ತಕಂಠದಿಂದ ನಾಲ್ಕಾರು ವಚನಗಳಲ್ಲಿ ಕೊಂಡಾಡಿದ್ದಾನೆ. ಅವುಗಳಲ್ಲಿ ಕೆಲವು ಇವು:

ಬಸವಗುರುವಿನ ಹೆಸರ ಬಲ್ಲವರಾರಿಲ್ಲ
ಪುಸಿ ಮಾತನಾಡಿ ಕೆಡದಿರಿ ಲೋಕಕ್ಕೆ
ಬಸವನೇ ಕರ್ತ ಸರ್ವಜ್ಞ

ಎಸಗುತಿಹ ಪಾಪಕ್ಕೆ ಬಸವ ಶರಣೆಂದೆಡೆ
ಸಸಿನ ಕತ್ತಲೆಯು ಹರಿವಂತೆ ಕರ್ಮಗಳು
ಹಸಗೆಟ್ಟು ಹೋಹವು ಸರ್ವಜ್ಞ

ಅವರ ವಚನಗಳ ಪ್ರಭಾವ ಸರ್ವಜ್ಞನ ಸಾಹಿತ್ಯದ ಮೇಲೆ ದಟ್ಟವಾಗಿಯೇ, ಪ್ರತ್ಯಕ್ಷವಾಗಿಯೇ ಇವೆ. ಬಸವಣ್ಣನವರ ಪ್ರಸಿದ್ಧವಾದ ವಚನವಾದ "ಕಲ್ಲನಾಗರ ಕಂಡರೆ ಹಾಲನೆರೆಯೆಂಬರು" ಎಂಬುದರ ಭಾವ ಸರ್ವಜ್ಞನಲ್ಲಿ ಹೀಗೆ ಅವತರಿಸಿದೆ.

ಉಣಬಂದ ಲಿಂಗಕ್ಕೆ ಉಣಲಿಕ್ಕದಂತಿರಿಸಿ
ಉಣದಿರ್ದ ಲಿಂಗಕ್ಕುಣಬಡಿಸಿ ಕೈಮುಗಿವ
ಬಣಗುಗಳ ನೋಡ ಸರ್ವಜ್ಞ

ಇಂಥ ಹತ್ತಾರು ಉದಾಹರಣೆಗಳನ್ನು ಕೊಡಬಹುದು. ಈಗಾಗಲೇ ವಿದ್ವಾಂಸರು ತೌಲನಿಕ ಅಧ್ಯಯನ ಮಾಡಿ ಅಂಥ ವಚನಗಳ ಮೂಲವನ್ನು ಗುರುತಿಸಿದ್ದಾರೆ. ಇಡೀ ವಚನವನ್ನು ಅನುಸರಿಸಿರುವುದುಂಟು, ವಚನ ಭಾಗವನ್ನು ಹೆಕ್ಕಿ ತೆಗೆದುಕೊಂಡಿರುವುದು ಉಂಟು.

ಕರ್ಮಯೋಗಿ ಸಿದ್ಧರಾಮನ ವಚನ

ಕಲ್ಪವೃಕ್ಷ ಮರವೆನ್ನಬಹುದೇ?

ಕಾಮಧೇನು ಪಶುವೆನ್ನಬಹುದೇ?

ಪರುಷ ಪಾಷಾಣವೆನ್ನಬಹುದೇ?

ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನನ

ನುಂಗಿದವರೆಲ್ಲ ಮಾನವರೆನ್ನಬಹುದೇ?

ಸರ್ವಜ್ಞನ ವಚನದಲ್ಲಿ ಹೀಗೆ ಪರಿವರ್ತಿತವಾಗಿ ಬಂದಿದೆ.

ಸುರತರುವು ಮರನಲ್ಲ ಸುರಭಿಯೊಂದಾವಲ್ಲ

ಪರುಶಪಾಷಾಣದೊಳಗಲ್ಲ ಗುರುರಾಯ

ನರರೊಳಗಲ್ಲ ಸರ್ವಜ್ಞ

ಅಲ್ಲದೆ "ಎಷ್ಟೋ ಕಡೆ ಎರಡು ಮೂರು ವಚನಗಳ ಭಾವವನ್ನು ಒಂದು ಪದ್ಯದಲ್ಲಿ ಧ್ವನಿಸಿರುವುದುಂಟು. ಸಂಕ್ಷಿಪ್ತತೆಯಿಂದಾಗಿ ಅಂತಹ ಪದ್ಯಗಳು ಹೆಚ್ಚು ಶಕ್ತಿಯನ್ನು ಗಳಿಸಿಕೊಳ್ಳುತ್ತವೆ" [೧೮]

ಕೊನೆಯದಾಗಿ ಚಿದಾನಂದಮೂರ್ತಿಯವರ ಈ ಪರಿಗಣನೆಯನ್ನು ದಾಖಲಿಸಿ ಈ ಚರ್ಚೆಯನ್ನು ಮುಕ್ತಾಯ ಮಾಡಬಹುದು.

"ಕಾವ್ಯಗುಣದ ದೃಷ್ಟಿಯಿಂದ ಸರ್ವಜ್ಞ ಬಸವಣ್ಣನವರನ್ನು ಹೋಲುತ್ತಾನೆ. ಇಬ್ಬರದೂ ನಿಜವಾದ ಕವಿಹೃದಯ. ವಚನಕಾರರಲ್ಲೆಲ್ಲಾ ಬಸವಣ್ಣನವರ ಪ್ರಭಾವ ಸರ್ವಜ್ಞನ ಮೇಲೆ ಅಪರಿಮಿತವಾಗಿದ್ದರೂ ಮನೋಭಾವದ ದೃಷ್ಟಿಯಿಂದ ಅವನು ಅಲ್ಲಮಪ್ರಭುವಿಗೆ ಹೆಚ್ಚು ಸಮೀಪವಾಗುತ್ತಾನೆ .......... ಇಬ್ಬರೂ ಅಲೆಮಾರಿ ಕವಿಗಳು, ಒಂದು ಸ್ಥಳಕ್ಕೆ ಅಂಟದ ಅನುಭಾವಿಗಳು" [೧೯]

## ಜಾನಪದ ಮೂಲದ್ರವ್ಯ

ಅವನ ಬದುಕನ್ನು, ವ್ಯಕ್ತಿತ್ವವನ್ನು, ಅನುಭಾವವನ್ನು ಮುಖ್ಯವಾಗಿ ಅವನ ಶಿಷ್ಟವಲ್ಲದ ವಿಶಿಷ್ಟ ನುಡಿಗಟ್ಟನ್ನು ರೂಪಿಸಿದ್ದು ಜಾನಪದ ಸಂಪರ್ಕ. ಆತನು ಒಳಗೆ, ಹೊರಗೆ, ಆದ್ಯಂತವಾಗಿ ಜಾನಪದ ಕವಿ. ಜನಪದದ ನಾಡಿಮಿಡಿತವನ್ನು ಬಲ್ಲವನು. ನಮ್ಮ ಮಹಾಕವಿಗಳಿಗೆ ಜಾನಪದ, ವೈವಿಧ್ಯಕ್ಕಾಗಿ ಸೇರಿಕೊಂಡ ದೇಶಿ. ಈ ಮಹಾಕವಿಗೆ ಜಾನಪದವೇ ಉಸಿರು. ಶಿಷ್ಟಕಾವ್ಯ ಪರಂಪರೆಯ ರಸಸಿದ್ಧಾಂತದಿಂದ ಬಹುದೂರ ಇದು. ಇಲ್ಲಿ ಮಾರ್ಗಕಾವ್ಯದ ಕ್ಲಿಷ್ಟ ಶ್ಲೇಷ, ಪ್ರಾಸಾನುಪ್ರಾಸ, ಛಂದೋವಿನ್ಯಾಸಗಳಿಲ್ಲ. ಇದು ಕಷ್ಟಜೀವಿಗಳ ಹೋರಾಟದ ಬದುಕಿನ ನೋವು ನಲಿವುಗಳ, ಉದ್ಗಾರ ಸಂಭ್ರಮಗಳ ನೇರದರ್ಶನ. ಇಲ್ಲಿ ಮುಚ್ಚುಮರೆ ಇಲ್ಲ; ಕಪಟವಿಲ್ಲ, ಶೂದ್ರರ ಮನಸ್ಸಿನ ಕೆಚ್ಚು, ಅವರ ಪ್ರಾಕೃತಿಕ ಸ್ವಭಾವ, ಒರಟುತನ ಸಹಜವೇ. ನಾಗರಿಕರಿಗೆ ಅಸಹಜ, ಅಸಹ್ಯವೆನಿಸುವ ನೀತಿರೀತಿಗಳು ಇಲ್ಲಿ ಸಹಜ, ಸಹ್ಯ. ಈತ ನೂರಾರು ಗಾದೆ ಮಾತುಗಳನ್ನು, ಲೋಕೋಕ್ತಿಗಳನ್ನು

ಬಳಸಿಕೊಂಡಿದ್ದಾನೆ. ಇವನ ಮಾತುಗಳ ಆನಂತರ ಗಾದೆಗಳಂತೆ ಬಳಕೆಯಾಗಿವೆ. ಸತ್ಯವನ್ನು ನೇರವಾಗಿ, ಒರಟಾಗಿ, ಆಡುಮಾತನ್ನು ಹೇಳುವ ರೀತಿ ಜನಪದದ ಲಕ್ಷಣ. ಅಲ್ಲಿ ಮುಚ್ಚುಮರೆಯಿಲ್ಲ.

ಕುಮಾರವ್ಯಾಸನಲ್ಲಿ ಕ್ವಚಿತ್ತಾಗಿ ಕಾಣುವ ಈ ಜನಪದಸತ್ವ ಇಲ್ಲಿ ಜೀವದ್ರವ್ಯವಾಗಿದೆ. ಅವನ ಸಾಹಿತ್ಯದ ಛಂದದಿಂದ, ಅಂದದವರೆಗೂ ವ್ಯಾಪಿಸಿದೆ.

ಅವನು ಬಳಸಿಕೊಂಡ (ಮೂಲ ಅಂಶಗಣ ಘಟಿತ) ತ್ರಿಪದಿಯೇ ಅಚ್ಚಗನ್ನಡ ದೇಸಿಛಂದಸ್ಸು, ಅದೊಂದು ಹಾಡುಗಬ್ಬ. ಅಲ್ಲಿ ಪ್ರಾಸದ ನಿಯಮವಿದ್ದರೂ, ಅದಸಹಜ, ಅನೇಕ ಕಡೆ ಅದನ್ನು ಉಲ್ಲಂಘಿಸಿರುವುದೂ ಇದೆ. ಎಷ್ಟೊಂದು ಜಾನಪದ ಗಾದೆ ಮಾತುಗಳು! ಉಪಮಾನಗಳು! ಅನುಭವದ ನುಡಿಕಿಡಿಗಳು!!!

೧) ಅಟ್ಟಡಿಗೆ ರುಚಿಯ ಸಟ್ಟುಗವು ಬಲ್ಲುದೇ?

೨) ಭಂಗಿಯನು ಸೇದುವನ ಭಂಗವನು ಏನೆಂಬೆ?

೩) ಕಳಹೋಗಿ ಕೆಮ್ಮಿ ಸತ್ತಂತೆ

೪) ಕುರುಡಂಗೆ ಸುಳಿದಾಟ ಲೇಸು

೫) ಕೈಲಾಸ ಕೈಯ ಮರೀಚಿಕೆಯೇ?

೬) ದ್ವಿಜ ತನ್ನ ಮಕ್ಕಳನೇ ತಿಂದ

೭) ಬಳ್ಳಿಗುರುಡರು ಕೂಡಿ ಹಳ್ಳವನು ಬಿದ್ದಂತೆ

೮) ಬೆಣ್ಣೆ ಬೆಂಕಿಯ ನಡುವೆ ತಣ್ಣಗಿರಬಲ್ಲುದೇ?

೯) ಸತ್ಯವೆಂಬುದು ತಾನು ಹಿತ್ತಲಗಿಡನೋಡಾ

೧೦) ಉಣ್ಣೆ ಕೆಚ್ಚಲೊಳಿರ್ದು ಉಣ್ಣದದು ನೊರೆವಾಲ

೧೧) ಸತ್ಯರ ಒಡನಾಟ ಮತ್ತೆ ಸಕ್ಕರೆತುಪ್ಪ

೧೨) ತಾಗಿ ಬಾಗುವುದರಿಂದ ತಾಗುದಿರುವುದೇ ಲೇಸು

೧೩) ಕೋಟಿವಿದ್ಯೆಗಳಲಿ ಮೇಟಿ ವಿದ್ಯೆಯೇ ಮೇಲು

೧೪) ಕೊಟ್ಟು ಕುದಿಯಲು ಬೇಡ; ಕೊಟ್ಟದ ಕೇಳಬೇಡ

೧೫) ಕೊಟ್ಟದ್ದು ತನಗೆ, ಬಚ್ಚಿಟ್ಟದ್ದು ಪರರಿಗೆ

೧೬) ಹಸಿಯ ಸಮಿಧೆಯ ತಂದು ಹೊಸೆದವರುಂಟೆ ಕಿಚ್ಚು?

ಇತ್ಯಾದಿ ನೂರಾರು ಜಾನಪದರ ಅನುಭವಕೋಶದಿಂದ ಹೆಕ್ಕಿ ತೆಗೆದ ನುಡಿಮುತ್ತುಗಳು, ಕಿಡಿಗಳು, ಚೂಪುಗಲ್ಲುಗಳು, ಮುಳ್ಳುಗಳು ಹಲವಿವೆ.

ನುಡಿ ಬಳಕೆಯಲ್ಲಿ ಯಾವ ಮಡಿವಂತಿಕೆಯೂ ಇಲ್ಲ, ಶಿಷ್ಟಾಶಿಷ್ಟವೆಂಬ ಭೇದವಿಲ್ಲ, ಹಸಿ ಗೋಡೆಯಲ್ಲಿ ಹರಳು ಒಗೆದಂತೆ ಅದು ಪರಿಣಾಮ ರಮ್ಯವಾದರೆ ಸಾಕು.

ಕಂಡಕಂಡವರು ಏರಲಿಕೆ ಕೈಲಾಸ ರಂಡೆಯ ಹೊರಸೆ ಸರ್ವಜ್ಞ

ಮುಸಿಕಿರ್ದ ಮಲವನೊಳಗಿರಿಸಿ ಪೃಷ್ಟವನು ಹಿಸುಕಿ ತೊಳೆದಂತೆ

ಮೂರೆಳೆಯನುಟ್ಟಾತ ಹಾರುವಡೆ ಸ್ವರ್ಗಕೆ

ನೂರೆಂಟು ಎಳೆಯ ಕೌದಿಯನು ಹೊದ್ದಾತ

ಹಾರನೇಕಯ್ಯ ಸರ್ವಜ್ಞ

ಉಚ್ಚೆಯ ಬಚ್ಚಲು ಚಿಕ್ಕದೆಂದೆನಬೇಡ

ಅಚ್ಯುತ ಬಿದ್ದ ಅಜಬಿದ್ದ ದೇವೇಂದ್ರ

ಎಚ್ಚೆತ್ತುಬಿದ್ದ ಸರ್ವಜ್ಞ

ಇತ್ಯಾದಿ ನೂರಾರು ಉದಾಹರಣೆಗಳನ್ನು ಕೊಡುತ್ತಾ ಹೋಗಬಹುದು.

(ಸರ್ವಜ್ಞನ ವಚನಗಳಲ್ಲಿ ಕಾಣುವ ಜಾನಪದ ಭಂಡಾರವನ್ನು ಕುರಿತು ವಿಶೇಷವಾಗಿ ಮುಂದೆ ಪರಿಶೀಲಿಸಲು ಅವಕಾಶವಿದೆ).

ಒಟ್ಟಿನಲ್ಲಿ ಅವನ ಬಾಹ್ಯ-ಆಂತರಿಕ ವ್ಯಕ್ತಿತ್ವವನ್ನು ರೂಪಿಸಿದ ಮುಖ್ಯ ದ್ರವ್ಯ, ಮುಖ್ಯ ಮೃತ್ತಿಕೆಗಳೆಂದರೆ, ವಚನ ಸಾಹಿತ್ಯ ಹಾಗೂ ಜಾನಪದ. ಆ ಎಲ್ಲ ಶಕ್ತಿಪ್ರಭಾವಗಳನ್ನು ಜೀರ್ಣಿಸಿಕೊಂಡು ಸರ್ವಜ್ಞ ತನ್ನದೇ ವಿಶಿಷ್ಟ ವ್ಯಕ್ತಿತ್ವದ ಛಾಪನ್ನು, ಹೆಜ್ಜೆಯ ಗುರುತುಗಳನ್ನು ಪರಂಪರೆಯಲ್ಲಿ ದಾಖಲಿಸಿ ಹೋಗಿದ್ದಾನೆ ಎಂಬುದು ಮಾತ್ರ ಸತ್ಯ. ಅವನ ವ್ಯಕ್ತಿತ್ವದ ಮುಮ್ಮುಖಗಳೆಂದರೆ; ಮೂರು ಆಯಾಮಗಳೆಂದರೆ, ಸತ್ಯಪ್ರಿಯತೆ, ನಿರ್ಭೀತಿ, ಮತನಿರಪೇಕ್ಷತೆ.

ಈ ಕೊನೆಯ ಆಯಾಮವನ್ನು ಕುರಿತು ಒಂದೆರಡು ಮಾತನ್ನು ಹೇಳಿ ಈ ಅಧ್ಯಾಯವನ್ನು ಮುಗಿಸಬಹುದು. ನಮ್ಮ ಸಮಸ್ತ ಪ್ರಾಚೀನ ಸಾಹಿತ್ಯ ಜೈನ, ವೀರಶೈವ, ಬ್ರಾಹ್ಮಣ ಎಂಬ ಮತೀಯ ಚೌಕಟ್ಟಿನಲ್ಲಿ ಸೆರೆಯಾಗಿದೆ. ಕವಿಚರಿತೆಕಾರರು ಮಾಡಿದ ಈ ವಿಭಾಗ ಸಂಪೂರ್ಣ ಅವಾಸ್ತವಿಕವಾಗಿರಲಿಲ್ಲ. ಮಹಾಕವಿಗಳು ಅಲ್ಲಿ ಇಲ್ಲಿ ಈ ಮತೀಯಾವರಣವನ್ನು ಉಲ್ಲಂಘಿಸಿ, ನಿಲುಕಿದ ಪ್ರಸಂಗಗಳುಂಟು. ಆದರೆ ಸರ್ವಜ್ಞನಂತೆ ಎಲ್ಲ ಮತದ 'ಹೊಟ್ಟತೂರಿ' ನಿಂತವರು ಇಲ್ಲವೇ ಇಲ್ಲ. ಆ ದೃಷ್ಟಿಯಲ್ಲಿ ಈತ ಅನನ್ಯ, ವಿಶಿಷ್ಟ.

ರಾಷ್ಟ್ರಕವಿ ಜಿ.ಎಸ್.ಶಿವರುದ್ರಪ್ಪ ಅವರ ಮಹತ್ವಪೂರ್ಣವಾದ ಈ ಕೆಳಗಿನ ಗ್ರಹಿಕೆಯೊಡನೆ ಈ ಅಧ್ಯಾಯಕ್ಕೆ ಸಮಾಪ್ತಿ ಹೇಳಬಹುದು.

**"………. ವಚನಕಾರರಲ್ಲಿಲ್ಲದ ಒಂದು ಉದಾರಧೋರಣೆ ಸರ್ವಜ್ಞನಲ್ಲಿದೆ. ವಚನಕಾರರು ಮೂಲತಹ ಒಂದು ನೂತನ ಮತ-ಧರ್ಮ ಪ್ರವರ್ತನೆಯ ಉದ್ದೇಶದಿಂದ ಬದ್ಧರಾಗಿದ್ದರೆ, ಸರ್ವಜ್ಞ ತಾನು ಅಂಥ ಯಾವ ಧರ್ಮ ಪ್ರಸಾರದ ಉದ್ದೇಶಕ್ಕೂ ಬದ್ಧನಾದವನಲ್ಲ"**[೨೦]

ಆದ್ದರಿಂದಲೇ ಈತ ಜಗದ ಕವಿ, ಯುಗದ ಕವಿ, ಜನಪದ ಕವಿ, ಸಾರ್ವಕಾಲಿಕ ಕವಿ.

**ಅಡಿಟಿಪ್ಪಣಿಗಳು:**

೧. ಶ್ರೀ ಉತ್ತಂಗಿ ಚನ್ನಪ್ಪ ಅವರು ಸಂಪಾದಿಸಿರುವ ಸರ್ವಜ್ಞನ ವಚನಗಳು, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೨೦೦೪, ಪುಟ ೫, ಪದ್ಯ ೨೫ ಮತ್ತು ಸರ್ವಜ್ಞನ ವಚನಗಳು, ಸಂಪಾದಕರು: ಡಾ|| ಹೆಚ್.ತಿಪ್ಪೇರುದ್ರಸ್ವಾಮಿ, ೧೯೭೫, ಪುಟ ೩೧ ಪದ್ಯ ೧

೨. ಸರ್ವಜ್ಞನ ವಚನಗಳು, ಸಂಪಾದಕರು: ಡಾ|| ಎಲ್.ಬಸವರಾಜು, ಗೀತಾ ಬುಕ್ ಹೌಸ್, ಮೈಸೂರು, ೧೯೭೨, ಪುಟ ೪೭, ಪದ್ಯ ೨೭೧

೩. ಸಾಹಿತ್ಯಾವಲೋಕನ, ವಿ.ಸೀ.

೪. ಶ್ರೀ ಉತ್ತಂಗಿ ಚನ್ನಪ್ಪ ಅವರು ಸಂಪಾದಿಸಿರುವ ಸರ್ವಜ್ಞನ ವಚನಗಳು, ಪ್ರಕಾಶ ಸಾಹಿತ್ಯ, ಬೆಂಗಳೂರು, ೧೯೯೯, ಪ್ರಸ್ತಾವನೆ

೫. ಸರ್ವಜ್ಞ, ಲೇಖಕಿ ಆರ್.ರೇಣುಕಮ್ಮ, ನಾಗರೇಖಾ ಪ್ರಕಾಶನ ಮಂದಿರ, ಬೆಂಗಳೂರು, ೧೯೬೪

೬. ಸರ್ವಜ್ಞ ಒಂದು ಸಮೀಕ್ಷೆ, ಸಂಪಾದಕರು: ಡಾ|| ಜಿ.ಎಸ್.ಶಿವರುದ್ರಪ್ಪ, ಬೆಂಗಳೂರು ವಿಶ್ವವಿದ್ಯಾನಿಲಯ, ೧೯೭೫, ಲೇಖಕರು: ಚಿದಾನಂದಮೂರ್ತಿ

೭. ಸರ್ವಜ್ಞ ಕವಿ, ಎ.ಆರ್.ಕೃಷ್ಣಶಾಸ್ತ್ರಿ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಪ್ರಚಾರ ಪುಸ್ತಕ ಮಾಲೆ–೨೯, ೧೯೬೯

೮. ಸರ್ವಜ್ಞನ ಜೀವನ ಕೃತಿಗಳು ಹಾಗೂ ಸಂದೇಶಗಳು, ಡಾ|| ಬಿ.ಕೆ.ಹೊಸಮಠ, ಶ್ರೀ ಜಗದ್ಗುರು ಅನ್ನದಾನೀಶ್ವರ ಸಂಸ್ಥಾನ ಮಠ, ಮುಂಡರಗಿ, ೧೯೮೩, ಪುಟ ೩೦

೯. ಸರ್ವಜ್ಞ ಒಂದು ಸಮೀಕ್ಷೆ, ಸಂಪಾದಕರು:ಡಾ|| ಜಿ.ಎಸ್.ಶಿವರುದ್ರಪ್ಪ, ಬೆಂಗಳೂರು ವಿಶ್ವವಿದ್ಯಾನಿಲಯ, ೧೯೭೫, ಲೇಖಕರು: ಜಿ.ಎಸ್.ಶಿವರುದ್ರಪ್ಪ, ಲೇಖನ: ಕವಿ ಸರ್ವಜ್ಞ

೧೦. ಮೇಲಿನದೇ, ಪುಟ ೯೬

೧೧. ಸರ್ವಜ್ಞ, ಲೇಖಕಿ ಆರ್.ರೇಣುಕಮ್ಮ, ನಾಗರೇಖಾ ಪ್ರಕಾಶನ ಮಂದಿರ, ಬೆಂಗಳೂರು, ೧೯೬೪

೧೨. ಸರ್ವಜ್ಞನ ವಚನಗಳು, ಸಂಪಾದಕರು: ಡಾ|| ಹೆಚ್.ತಿಪ್ಪೇರುದ್ರಸ್ವಾಮಿ, ೧೯೭೫, ಪೀಠಿಕೆ ಪುಟ ೧೨

೧೩. ಸರ್ವಜ್ಞ ಒಂದು ಸಮೀಕ್ಷೆ, ಸಂಪಾದಕರು: ಡಾ|| ಜಿ.ಎಸ್.ಶಿವರುದ್ರಪ್ಪ, ಬೆಂಗಳೂರು ವಿಶ್ವವಿದ್ಯಾನಿಲಯ, ೧೯೭೫, ಲೇಖನ: ಸರ್ವಜ್ಞ – ಜೀವನ ದೇಶಕಾಲ ವಿಚಾರ, ಲೇಖಕರು: ಡಾ.ಎಂ.ಚಿದಾನಂದಮೂರ್ತಿ, ಪುಟ ೧೨

೧೪. ಜಂಗಮ ಕವಿ ಸರ್ವಜ್ಞ (ವಿಚಾರ–ವಿಮರ್ಶೆ), ಡಾ|| ಬಿ.ಜಿ.ಚನ್ನೇಶ್ ಹೊನ್ನಾಳಿ, ಸಿಂಚನ ಗ್ರಂಥಮಾಲೆ, ಹಾವೇರಿ, ೨೦೦೮, ಪುಟ ೧೨

೧೫. ಸರ್ವಜ್ಞ ಒಂದು ಸಮೀಕ್ಷೆ, ಸಂಪಾದಕರು: ಡಾ|| ಜಿ.ಎಸ್.ಶಿವರುದ್ರಪ್ಪ, ಬೆಂಗಳೂರು ವಿಶ್ವವಿದ್ಯಾನಿಲಯ, ೧೯೭೫, ಪುಟ ೧೨, ಲೇಖನ: ಸರ್ವಜ್ಞ ಮತ್ತು ವಚನಕಾರರು, ಲೇಖಕರು: ಡಾ.ಎಂ.ಚಿದಾನಂದಮೂರ್ತಿ

೧೬. ಸರ್ವಜ್ಞನ ಜೀವನ ಕೃತಿಗಳು ಹಾಗೂ ಸಂದೇಶಗಳು, ಡಾ|| ಬಿ.ಕೆ.ಹೊಸಮಠ, ಶ್ರೀ ಜಗದ್ಗುರು ಅನ್ನದಾನೀಶ್ವರ ಸಂಸ್ಥಾನ ಮಠ, ಮುಂಡರಗಿ, ೧೯೮೩, ಪುಟ ೮೪

೧೭. ಶ್ರೀ ಉತ್ತಂಗಿ ಚನ್ನಪ್ಪ ಅವರು ಸಂಪಾದಿಸಿರುವ ಸರ್ವಜ್ಞನ ವಚನಗಳು, ಪ್ರಕಾಶ ಸಾಹಿತ್ಯ, ಬೆಂಗಳೂರು, ೧೯೯೯, ಪುಟ ೨೯, ೩೦

೧೮. ಸರ್ವಜ್ಞ ಒಂದು ಸಮೀಕ್ಷೆ, ಸಂಪಾದಕರು: ಡಾ|| ಜಿ.ಎಸ್.ಶಿವರುದ್ರಪ್ಪ, ಬೆಂಗಳೂರು ವಿಶ್ವವಿದ್ಯಾನಿಲಯ, ೧೯೭೫, ಲೇಖನ: ಸರ್ವಜ್ಞ ಮತ್ತು ವಚನಕಾರರು, ಲೇಖಕರು: ಚಿದಾನಂದಮೂರ್ತಿ, ಪುಟ ೨೫

೧೯. ಮೇಲಿನದೇ, ಪುಟ ೨೭

೨೦. ಸರ್ವಜ್ಞ ಒಂದು ಸಮೀಕ್ಷೆ, ಸಂಪಾದಕರು:ಡಾ|| ಜಿ.ಎಸ್.ಶಿವರುದ್ರಪ್ಪ, ಬೆಂಗಳೂರು ವಿಶ್ವವಿದ್ಯಾನಿಲಯ, ೧೯೭೫, ಲೇಖಕರು: ಜಿ.ಎಸ್.ಶಿವರುದ್ರಪ್ಪ, ಲೇಖನ: ಕವಿ ಸರ್ವಜ್ಞ

# ಅಧ್ಯಾಯ ೩

# ಸರ್ವಜ್ಞನ ವಚನಗಳಲ್ಲಿ ಸಾಮಾಜಿಕತೆ

## ೩.೧ ಸರ್ವಜ್ಞನ ವಚನಗಳ ಸ್ವರೂಪ, ಛಂದಸ್ಸು, ವ್ಯಾಪ್ತಿ (ಕೃತಿ ಸಂಖ್ಯೆ):

ಸರ್ವಜ್ಞನು ತನ್ನ ಅಭಿವ್ಯಕ್ತಿ ಮಾಧ್ಯಮವಾಗಿ ಜಾನಪದ ಛಂದಸ್ಸಿನ, ಅಡಕವಾದ ತ್ರಿಪದಿಯನ್ನೇ ಆದ್ಯಂತವಾಗಿ ಬಳಸಿದ್ದಾನೆ. ತ್ರಿಪದಿ ಅದರ ಹೆಸರೇ ತಿಳಿಸುವಂತೆ ಮೂರು ಪಾದಗಳ ರಚನೆ. ಅದರಲ್ಲೂ ಅದು ಜನಪ್ರಿಯವಾದ ಹಾಡುಗಬ್ಬ. ಮೂಲದಲ್ಲಿ ಅಂಶಗಣ ಘಟಿತವಾಗಿದ್ದು ಅನಂತರ ಮಾತ್ರಾ ಛಂದಸ್ಸಿಗೆ ಪರಿವರ್ತಿತವಾಗಿರಬೇಕೆಂಬುದು ವಿದ್ವಾಂಸರ ಅಭಿಪ್ರಾಯ. ಒಂದು ಅಭಿಪ್ರಾಯವನ್ನೋ, ಹೇಳಿಕೆಯನ್ನೋ, ಟೀಕೆಯನ್ನೋ ಸಮರ್ಥವಾಗಿ ನಿರೂಪಿಸಲು ಇದಕ್ಕಿಂತಲೂ ಪರಿಣಾಮಕಾರಿಯಾಗಿ ವ್ಯಂಜಿಸಬಲ್ಲ ಮತ್ತೊಂದು ಛಂದಸ್ಸು ಇಲ್ಲ. ಮುಕ್ತಕಗಳು, ಚುಟುಕಗಳು, ಲೋಕೋಕ್ತಿಗಳು ಈ ಪುಟ್ಟ ಶರೀರದಲ್ಲಿ ಅಡಕವಾಗಿ ಮೈದಾಳುತ್ತದೆ. ಈ ಗುಟ್ಟನ್ನು ಸರ್ವಜ್ಞ ಬಲ್ಲ. ಅವನ ಕಾವ್ಯೋದ್ದೇಶಕ್ಕೆ ಈ ಮಾಧ್ಯಮ 'ಕೈವೊಕ್ಕನಿಧಾನ'ವಾಗಿದೆ.

ಅದರ ಇತಿಹಾಸ ಸ್ವರೂಪ: ಕನ್ನಡ ಭಾಷೆಯ ಪ್ರಾಚೀನ ಶಾಸನಗಳಲ್ಲೊಂದಾದ (ಕ್ರಿ.ಶ.೭೦೦) ಬಾದಾಮಿಯ ಶಾಸನದಲ್ಲಿಯೇ ಅಂಶಗಣ ಘಟಕ ತ್ರಿಪದಿ ಬಳಕೆಯಾಗಿದೆ.

ಸಾಧುಂಗೆ ಸಾಧು ಮಾಧುರ್ಯಂಗೆ ಮಾಧುರ್ಯಂ
ಬಾಧಿಪ್ಪ ಕಲಿಗೆ ಕಲಿಯುಗ ವಿಪರೀತನ್
ಮಾಧವನೀತನೀ ಪೆರನಲ್ಲ

ಕನ್ನಡ ಸಾಹಿತ್ಯದುದ್ದಕ್ಕೂ, ಅದರಲ್ಲೂ ಹಾಡುಗಬ್ಬಗಳಲ್ಲಿ ಕ್ವಚಿತ್ತಾಗಿ ಚಂಪೂ ಕಾವ್ಯಗಳಲ್ಲಿ ತ್ರಿಪದಿ ಉಳಿದುಬಂದಿದೆ. 'ತ್ರಿಪದಿಯೇ ಕನ್ನಡ ವೃತ್ತಗಳ ಗಾಯತ್ರಿ' ಎಂಬ ದ.ರಾ.ಬೇಂದ್ರೆಯವರ ಮಾತಿನಲ್ಲಿ ಚಿರಸತ್ಯ ಬೆಳಗಿದೆ. ಅಕ್ಕಮಹಾದೇವಿ ವಿರಚಿತ 'ಯೋಗಾಂಗ ತ್ರಿವಿಧಿ' ಕನ್ನಡದ ಮೊದಲ ತ್ರಿಪದಿ ಕಾವ್ಯವೆಂಬ ಗೌರವಕ್ಕೆ ಪಾತ್ರವಾಗಿದೆ. ಅದನ್ನು ಅನುಸರಿಸಿ, ಅನೇಕ ವೀರಶೈವ ಕವಿಗಳು ಸ್ತೋತ್ರಗಳನ್ನು ತ್ರಿಪದಿಯಲ್ಲಿ ರಚಿಸಿದ್ದಾರೆ. ನಿಜಗುಣ ಶಿವಯೋಗಿಯ 'ಅನುಭವಸಾರ', 'ಅರವತ್ತುಮೂವರ ತ್ರಿವಿಧಿ'ಗಳು (ಕ್ರಿ.ಶ.೧೫೦೦) ಪ್ರಸಿದ್ಧವಾಗಿವೆ.

೧೬ನೆಯ ಶತಮಾನದ ಕಾಲಕ್ಕಾಗಲೇ ಅಂಶಗಣ ತ್ರಿಪದಿ ಮಾತ್ರಾಗಣಕ್ಕೆ ಪರಿವರ್ತಿತವಾಗುತ್ತಿತ್ತು ಎಂಬುದನ್ನು ವಿದ್ವಾಂಸರು ಗುರುತಿಸಿದ್ದಾರೆ. ನಿಜಗುಣರ 'ಅನುಭವಸಾರ' ಮತ್ತು 'ಪುರಾತನ ತ್ರಿವಿಧಿ' ಇವೆರಡೂ ಸಂಪೂರ್ಣ ಮಾತ್ರಾಗಳ ತ್ರಿಪದಿಯಲ್ಲಿವೆ' ಆ ಕಾಲಖಂಡಕ್ಕೆ ಸೇರಿರಬಹುದಾದ ಸರ್ವಜ್ಞನ ವಚನಗಳು ಸಹ

ಮಾತ್ರಾಗಣದಲ್ಲಿ ರಚಿತವಾಗಿವೆ ಎನ್ನಬಹುದು. ಮೊದಲ ಸಾಲಿನಲ್ಲಿ ೫/೫/೫/೫ ಮಾತ್ರೆಗಳೂ, ಎರಡನೆಯ ಸಾಲಿನಲ್ಲಿ ೧೮ ಮಾತ್ರೆಗಳು, ಮೂರನೆಯ ಸಾಲಿನಲ್ಲಿ ೧೩ ಮಾತ್ರೆಗಳೂ ಇರುವುದು ಇದರ ಸಾಮಾನ್ಯ ಲಕ್ಷಣ.

ಸರ್ವಜ್ಞನಿಂದ ರಚಿತವಾದ ತ್ರಿಪದಿಗಳ ಒಟ್ಟು ಸಂಖ್ಯೆ ಎಷ್ಟು? ಇದಕ್ಕೆ ಉತ್ತರ ಸುಲಭವಲ್ಲ. ವಿದ್ವಾಂಸರು ಈ ಬಗ್ಗೆ ವಿವಿಧ ಊಹೆಗಳನ್ನು ಮಾಡಿದ್ದಾರೆ. ಖಚಿತವಾಗಿ ಹೇಳಲು ಸಾಧ್ಯವಾಗಿಲ್ಲ. ತ್ರಿಪದಿಯ ರಚನೆ ಸುಲಭ, ಅನುಕರಣೆ ಸುಲಭ, ಆದ್ದರಿಂದ ಅವನಿಗೆ ದೇಶದ ರಸಿಕರು, ಅಭಿಮಾನಿಗಳು ಗುರುಕಾಣಿಕೆ ಎಂಬಂತೆ ಅವನ ಜಾಡನ್ನು ಅನುಕರಿಸಿ ಹತ್ತಾರು ತ್ರಿಪದಿಗಳನ್ನು ಸರ್ವಜ್ಞನ ಅಂಕಿತದಲ್ಲಿಯೇ ಬರೆದು ಸೇರಿಸಿಬಿಟ್ಟಿದ್ದಾರೆ. ಇದು ಅವನ ಜನಪ್ರಿಯತೆಗೆ ಸಾಕ್ಷಿ. ಕನ್ನಡ ಸಾಹಿತ್ಯ ಸಂದರ್ಭದಲ್ಲಿಯೇ ಇವನಿಗೆ ದೊರೆತಷ್ಟು ವಾಚಕವೃಂದ, ಅಭಿಮಾನಿವೃಂದ ಬೇರೆ ಯಾವ ಕವಿಗೂ ದೊರೆತಿರಲಾರದು. ಜನಸಾಮಾನ್ಯರ ನಡುವೆ ಇವನಿಗೆ ಭಾವಸಂವಾದ ಸಾಧ್ಯವಾಯಿತು. ಅದರಲ್ಲೂ ಅನಕ್ಷರಸ್ಥ ಆಸಕ್ತ ಕಾಯಕಜೀವಿಗಳೊಂದಿಗೆ. ಆದ್ದರಿಂದ 'ಸರ್ವಜ್ಞನ ವಚನ ಸಂಪುಟ' ಹಿಗ್ಗಿತು, ವಿಸ್ತರಿಸಿತು. ಮೂಲ ಯಾವುದು? ಪ್ರಕ್ಷಿಪ್ತ ಯಾವುದು ಎಂಬುದು ಸಮಸ್ಯೆಯಾಯಿತು.

ಅಷ್ಟೇ ಅಲ್ಲ. ಒಂದೇ ಮೂಲವಚನವು ಅನೇಕ ಪಾಠಾಂತರಗಳಲ್ಲಿ ದೊರೆಯುತ್ತದೆ. ಅವನ ಮೂಲವಚನಗಳು ಮೌಖಿಕ ಪರಂಪರೆಯಲ್ಲಿಯೇ ಜೀವಂತವಾಗಿದ್ದು, ಅನಂತರ ಬರವಣಿಗೆಗೆ ಇಳಿದಿರಬೇಕು. ಅವನೇ ಅವುಗಳನ್ನು ಬರೆದಿಟ್ಟು, ಸಂಗ್ರಹಿಸಿಟ್ಟು, ಈಗ ದೊರೆಯುವಂತೆ ಪದ್ಧತಿಗಳ ತಲೆಬರಹದಡಿಯಲ್ಲಿ ರೂಪಿಸಿರಬಹುದಾದ ಸಂಭವ ತೀರ ಕಡಿಮೆ. ಅವನ ಸಮಕಾಲೀನರೂ, ಅನುಕರಿಸಿದವರು ವರ್ಗೀಕರಿಸಿ ಪ್ರತಿ ಮಾಡಿರಬಹುದು. ಆರ್.ನರಸಿಂಹಾಚಾರ್ಯರು ನೂರಕ್ಕಿಂತ ಹೆಚ್ಚು ಓಲೆಯ ಪ್ರತಿಗಳನ್ನು ಶೋಧಿಸಿರುವುದಾಗಿ ಹೇಳಿಕೊಂಡಿದ್ದಾರೆ.[೧] ಉತ್ತಂಗಿಯವರು ಅನೇಕ ಓಲೆಯ ಪ್ರತಿಗಳನ್ನು ಕಾಗದದ ಪ್ರತಿಗಳನ್ನು, ಅಚ್ಚಾದ ಪ್ರತಿಗಳನ್ನು ಆಧರಿಸಿ ಕೆಲವು ಸೂತ್ರವನ್ನು ಅನುಸರಿಸಿ, ಮೂಲ ಸರ್ವಜ್ಞ ಕೃತ ವಚನಗಳು ೧೩೬೬ ಎಂದು ನಿರ್ಧರಿಸಿದ್ದರು. ಅಲ್ಲದೆ ೪೦-೫೦ ತ್ರಿಪದಿಗಳು ಸಂಶಯಾಸ್ಪದವೆಂದೂ, ಸುಮಾರು ೫೦೦ ತ್ರಿಪದಿಗಳು ಖಚಿತವಾಗಿ ಅವನದಲ್ಲವೆಂದೂ ಅನುಬಂಧದಲ್ಲಿ ಸೇರಿಸಿದ್ದರು. ಆ ಸಂಖ್ಯೆಯು ಸರ್ವಸಮ್ಮತವಲ್ಲ. ಭಿನ್ನಾಭಿಪ್ರಾಯಕ್ಕೆ, ವಾದವಿವಾದಕ್ಕೆ ಆಸ್ಪದ ದೊರಕಿದೆ. ಸಂಶೋಧನೆ ಮುಂದುವರೆದಿದೆ.

ಉತ್ತಂಗಿಯವರು ಸಂಪಾದನೆಯ ಮುಂದಿನ ಆವೃತ್ತಿಗಳನ್ನು ಪ್ರಕಟಿಸಿದವರು. ಅವರು ಪ್ರಕ್ಷಿಪ್ತವೆಂದು, ಅನುಮಾನಾಸ್ಪದವೆಂದೂ ಬದಿಗಿರಿಸಿದ ವಚನಗಳನ್ನು ಸೇರಿಸಿ ಅದರ ಸಂಖ್ಯೆಯನ್ನು ೨೧೦೦ಕ್ಕೆ ಏರಿಸಿದ್ದೂ ಉಂಟು.[೨] ಉತ್ತಂಗಿಯವರ ಸಂಪಾದನೆಯ ಮತ್ತೊಂದು ಆವೃತ್ತಿಯನ್ನು ಪ್ರಕಟಿಸಿದ ಕ.ಸಾ.ಪ. ಸಹ ೨೧೦೦ ವಚನಗಳನ್ನು ಸೇರಿಸಿದೆ.[೩]

ಎಲ್.ಬಸವರಾಜು ಅವರು 'ಪರಮಾರ್ಥ' ಎಂಬ ಹೆಸರನ್ನು ಸಂಪಾದಿಸಿದ ಸರ್ವಜ್ಞ ವಚನಗಳನ್ನು ೯೩೭ ಅನ್ನು ಮಾತ್ರ ಸರ್ವಜ್ಞಕೃತವೆಂದು ನಿರ್ಧರಿಸಿ, ಮಿಕ್ಕ ೭೧೫ ವಚನಗಳನ್ನು 'ಸರ್ವಜ್ಞನ ಹೆಸರಿನಲ್ಲಿ ಹಚ್ಚಿರುವ ವಚನಗಳು' ಎಂಬ ಶೀರ್ಷಿಕೆಯಡಿ ಕೊಟ್ಟು ಅವು ಸರ್ವಜ್ಞಕೃತವಲ್ಲವೆಂದು ತೀರ್ಪು ಕೊಟ್ಟಿದ್ದಾರೆ.

ಆದರೆ ಈ ನಿರ್ಣಯ ಇಲ್ಲಿಗೆ ನಿಲ್ಲದೆ ಪ್ರಸಿದ್ಧ ಸಂಶೋಧಕರಾದ ಚಿದಾನಂದಮೂರ್ತಿ ಮುಂತಾದವರು ಇದಕ್ಕೆ ಆಕ್ಷೇಪವೆತ್ತಿದ್ದಾರೆ.

ಅವನ ಕಾಲ ನಿರ್ಣಯದಂತೆ ಅವನ ಕೃತಿಸಂಖ್ಯೆಯ ನಿರ್ಧಾರವೂ ಒಂದು ಯಕ್ಷ ಪ್ರಶ್ನೆಯೆಂದು ಸಧ್ಯಕ್ಕೆ ಕೈಬಿಡಬಹುದು. ಅಲ್ಲದೆ ಸರ್ವಜ್ಞಕೃತವಲ್ಲವೆಂದು ವಿದ್ವಾಂಸರು ಕೈಬಿಟ್ಟಿರುವ ಒಂದು ವಚನದಲ್ಲಿ ಒಟ್ಟು ವಚನಗಳ ಸಂಖ್ಯೆ ನಮೂದಿಸಿರುವಂತೆ ಭಾಸವಾಗುತ್ತದೆ. ಆದರ ಅನ್ವಯ ಸ್ಪಷ್ಟವಾಗಿಲ್ಲ. ಅದು ಹೀಗಿದೆ.

ಏಳು ಕೋಟಿಯ ಕೋಟಿ, ಏಳು ಲಕ್ಷಕೆ ಲಕ್ಷ
ಏಳು ಸಾವಿರದ ಎಪ್ಪತ್ತು ವಚನಗಳ
ಹೇಳಿದನು ಕೇಳು ಸರ್ವಜ್ಞ

ಇದರ ಭಾವಾರ್ಥ ಅಸಂಖ್ಯಾತ ಎಂದು ಆಗಬಹುದು ಅಷ್ಟೇ.

ಸರ್ವಜ್ಞ ವಚನಗಳ ತಿರುಳು, ವಸ್ತು, ಉದ್ದೇಶ ಏನು ಎಂದು ಅವನ ಉಪಲಬ್ಧವಚನಗಳನ್ನೆ ಆಧರಿಸಿ ವಿಚಾರ ಮಾಡಿದರೆ, ಒಂದು ಮೌಲ್ಯಯುತವಾದ ಯೋಗ್ಯ ಸಮಾಜವನ್ನು ರೂಪಿಸುವುದು ಅವನ ಮಹದಾಶೆಯಾಗಿ ತೋರುತ್ತದೆ.

ಅದಕ್ಕಾಗಿ ಪ್ರಸ್ತುತ ಸಮಾಜದ ತಲಸ್ಪರ್ಶಿ ಪರಿಚಯದಿಂದ ಅವನ ಅನ್ವೇಷಣೆ ಮೊದಲಾಗುತ್ತದೆ. ಮಾನವನ ರಾಗದ್ವೇಷಗಳ ಪರಿಣಾಮ, ವೃತ್ತಿಪ್ರವೃತ್ತಿಗಳ ಬಂಧ, ಸಂಬಂಧ, ಲೌಕಿಕ, ಪಾರಲೌಕಿಕ ಚಿಂತನಗಳ ಇತಿಮಿತಿ, ದೈವ, ಮುಕ್ತಿ ಮೊದಲಾದ ಅಮೂರ್ತ ಆದರ್ಶಗಳ ಕನಸುಗಳ ಬೇರನ್ನು ಮೂಲವನ್ನು ಬೆದಕುತ್ತಾನೆ. ಹಸಿವು, ಕಾಮ, ಹಿಂಸಾಪ್ರವೃತ್ತಿ, ಆಕ್ರಮಣಶೀಲತೆಯಂಥ ಪ್ರಾಣಿಸಹಜ ದೈತ್ಯ, ಪ್ರಾಕೃತಿಕ, ಆದಮ್ಯ ಪ್ರೇರಣೆಗಳು (instinct) ಮಾನವಲೋಕವನ್ನು ತೊತ್ತಳದುಳಿಯುತ್ತಿರುವುದನ್ನು ಮಾನವ ಮನೋರಂಗದಲ್ಲಿ ಭೂತನರ್ತನ ಮಾಡುತ್ತಿರುವುದನ್ನು ಕಂಡು ದಿಗ್ಭ್ರಮೆಗೊಳ್ಳುತ್ತಾನೆ. ಅವುಗಳಿಗೆ ನೀತಿಪಾಠವೊಂದೇ – 'ಸತ್ಯಂ ವದ, ಧರ್ಮಂ ಚರ' ಪರಿಹಾರವಾಗಲಾರದು ಎಂದು ಮನದಟ್ಟು ಮಾಡಿಕೊಳ್ಳುತ್ತಾನೆ.

ಸಮಾಜದ ಹುಳುಕನ್ನು, ಕೊಳಕನ್ನು ಬೆದಕಿ, ಹರವಿ, ಟೀಕಿಸಿ, ಬಯ್ದು, ಚಾಟಿ ಏಟು ಕೊಟ್ಟು ಬೆಚ್ಚುವಂತೆ ಮಾಡುತ್ತಾನೆ. ನಾಗರಿಕಸಮಾಜ ಶಿಷ್ಟತೆಯ ಹೆಸರಿನಲ್ಲಿ ಮುಚ್ಚಿಟ್ಟುಕೊಂಡು ಸೋಗು ಹಾಕುತ್ತಿರುವುದನ್ನು ಬಯಲು ಮಾಡುತ್ತಾನೆ.

ಅವನೊಂದು ಸುಂದರ ಸಮಗ್ರ ದೋಷರಹಿತ ತತ್ತ್ವಮೀಮಾಂಸೆಯನ್ನು ರೂಪಿಸಲು ಇಚ್ಛಿಸುವುದಿಲ್ಲವಾಗಿ, ಅವನ ವಚನಗಳಲ್ಲಿಯೇ ಅನೇಕ ವಿರೋಧಾಭಾಸಗಳು, ತಾತ್ಕಾಲಿಕ ನಿರ್ಣಯಗಳು, ಪಾರ್ಶ್ವ ಸತ್ಯಗಳು, ಸತ್ಯದ ಆಭಾಸಗಳು ದಂಡಿಯಾಗಿ ಸಿಗಬಹುದು. ಅವನ ಜೀವನಾನುಭವ ಹೆಚ್ಚಾದಂತೆ ಅಭಿಪ್ರಾಯಗಳು ಬದಲಾಗುತ್ತಾ ಸಾಗಬಹುದು. ಹೆಚ್ಚು ಪರಿಷ್ಕಾರಗೊಳ್ಳಬಹುದು. ಅವನಾಗಲೀ, ಅವನ ವಿಚಾರಗಳಾಗಲೀ ನಿಂತನೀರಲ್ಲ, ಅವನೊಂದು ಜೀವನದಿ. ಹಿಗ್ಗುತ್ತದೆ, ಕುಗ್ಗುತ್ತದೆ, ಕವಲೊಡೆಯುತ್ತದೆ, ಕಾಲುವೆಯಾಗಿ ಹರಿಯುತ್ತದೆ, ಜಲಪಾತವಾಗಿ ಧುಮ್ಮಿಕ್ಕುತ್ತದೆ. ಗುರುವಿನಿಂದ, ಹಿರಿಯರಿಂದ, ಸಮಾಜದ ನಡಾವಳಿಯಿಂದ ಕಲಿತ, ತಿಳಿದ ಗ್ರಹಿಸಿದ ಸಮಸ್ತ 'ಅರಿವನ್ನು' ತನ್ನ ಮುಕ್ತ ವಿಚಾರಧಾರೆಯ ನಿಕಷದಲ್ಲಿ ಪರೀಕ್ಷಿಸಲು, ಉಜ್ಜಿ ನೋಡುವ 'ಧಾತು'ವುಳ್ಳವನು ಸರ್ವಜ್ಞ.

ಯಾವುದನ್ನೂ ವೇದೋಕ್ತ, ಗುರುಪ್ರೋಕ್ತ, ಭಗವಾನ್ ಉವಾಚ – ಎಂದು ಬಡಪೆಟ್ಟಿಗೆ ಒಪ್ಪಿಕೊಳ್ಳುವ ಜಾಯಮಾನ ಇವನದಲ್ಲ. ಈ ದೃಷ್ಟಿಯಲ್ಲಿ ಕನ್ನಡ ಸಾಹಿತ್ಯ ಪರಂಪರೆಯಲ್ಲಿಯೇ ಈತ ಅನನ್ಯ, ಅಭೂತ, ವಿಶಿಷ್ಟ.

ವೈಜ್ಞಾನಿಕ, ವೈಚಾರಿಕ ಎಂಬ ಗಟ್ಟಿ ನೆಲದ ಮೇಲೆ ನಿಂತವನು. (ಆದರೆ ಆ ವೈಜ್ಞಾನಿಕ, ವೈಚಾರಿಕ ದಿಗಂತ ಆಯುಗಮಾನದ ಪರಿಧಿಯನ್ನು ಸಹಜವಾಗಿಯೇ ಉತ್ತರಿಸಲಾಗದು ಎಂಬುದನ್ನೂ ಸಹ ನಾವು ಅರಿತಿರಬೇಕು).

**ಯುಗಧರ್ಮದ, ಸಮಾಜದ ನಡಾವಳಿಯ ಪ್ರಭಾವಗಳ ಗುರುತ್ವಾಕರ್ಷಣೆಯಿಂದ ಸರ್ವಜ್ಞನೂ ಪಾರಾಗಲಾರ. ಅದಕ್ಕೆ ಅವನ ವಚನಗಳಲ್ಲಿಯೇ ದಂಡಿಯಾದ ಉದಾಹರಣೆಗಳಿವೆ. ಅಷ್ಟೇ ಅಲ್ಲ, ನೂರಾರು ವಚನಗಳು ಬರಿ ಚಮತ್ಕಾರದಿಂದ ಕೂಡಿದ್ದು ಶಬ್ದದಾಟವಾಗಿವೆ. ಮಾತಿನ ಚಪಲಕ್ಕಾಗಿ ನುಡಿದಂತೆ ತೋರುತ್ತದೆ. ಉದಾಹರಣೆಗೆ 'ಲೇಸು' ಎಂದು ಮುಕ್ತಾಯವಾಗುವ ಸಾಲುಗಳು, ಹಾಗೆಯೇ 'ಸಲ್ಲ, ಹೊಲ್ಲ' ಎಂಬ ಪ್ರಾಸವಿರುವ ಸಾಲುಗಳು ತೀರ ಸಾಮಾನ್ಯ ರಚನೆಗಳಾಗಿವೆ. ಅವುಗಳನ್ನೆಲ್ಲ ಕವಿಕೃತವಲ್ಲವೆಂದು ಕೈಬಿಡುವುದು ಸುಲಭ ಮಾರ್ಗ, ಹಾಗಾದರೆ ಉಳಿಯುವುದೇನು? ಬಹುಶಃ ಕೆಲವು ನೂರು ಗಟ್ಟಿ ಕಾಳುಗಳು, ವಚನಗಳು, ಸಾರಭೂತವಾದವುಗಳು. ಅವು ಸರ್ವಜ್ಞನನ್ನು ಚಿರಂಜೀವಿಯಾಗಿ ಉಳಿಸಲು ಸಾಕು.**

ಅವನು ವೈಚಾರಿಕವಾಗಿ ಎಷ್ಟೇ ಗಟ್ಟಿಯಿದ್ದರೂ, ಮುಕ್ತ ಮನಸ್ಕನಿದ್ದರೂ, ಯುಗಧರ್ಮದ ನಂಬಿಕೆ, ಬೇಕುಬೇಡಗಳು, ಮನ್ನಣೆ ತಿರಸ್ಕಾರಗಳನ್ನು ಸಾರಾಸಗಟಾಗಿ, ಆಮೂಲಾಗ್ರವಾಗಿ ಅಲ್ಲಾಡಿಸಿ, ಕಿತ್ತೆಸೆದು, ತೊಳೆದು, ಕೈತೊಳೆದುಕೊಂಡು ವಚನಕಾರರಂತೆ ಹೊಸಕಾಣ್ಕೆಯನ್ನು ಕೊಡಲಾರ.

ಆದ್ದರಿಂದಲೇ ವೇಶ್ಯಾವೃತ್ತಿ, ಸ್ತ್ರೀಸ್ವಭಾವಗಳ ಬಗ್ಗೆ ಅವನ ಒಟ್ಟು ಚಿಂತನೆ/ವಿಚಾರಗಳು ಸಾಂಪ್ರದಾಯಿಕವಾಗಿದೆ. ಯಾವುದೋ ಒಂದು ದಿವ್ಯಕ್ಷಣದಲ್ಲಿ ಸತ್ಯದ ಸೆಳಕನ್ನು ಗುರುತಿಸಿದ್ದರೂ ಅದು ಅವನಲ್ಲಿ ಒಂದು ತಾತ್ವಿಕ ನೆಲೆಗಳನ್ನು ಪಡೆದುಕೊಳ್ಳುವುದಿಲ್ಲ, ಸ್ಥಾಯಿಯಾಗಿ ನಿಲ್ಲುವುದಿಲ್ಲ.

ಈ ಮೇಲಿನ ಗ್ರಹಿಕೆಗಳನ್ನು ಹಿನ್ನೆಲೆಯಾಗಿ ಇರಿಸಿಕೊಂಡು ಸಮಾಜದ ವಿವಿಧ ಸಂಸ್ಥೆಗಳು (ಅಂಗಗಳ) ಬಗ್ಗೆ ಅವನು ವ್ಯಕ್ತಪಡಿಸಿರುವ ಅಭಿಪ್ರಾಯಗಳನ್ನು ಸಮೀಕ್ಷಿಸಬಹುದು.

### ೩.೨ ಸರ್ವಜ್ಞನ ವಚನಗಳಲ್ಲಿ ಕುಟುಂಬ

ಕೌಟುಂಬಿಕ ವ್ಯವಸ್ಥೆ ಸಮಾಜದ ಒಂದು ಸನಾತನ, ಸುಭದ್ರ ವ್ಯವಸ್ಥೆ, ಅದನ್ನು 'ಗೃಹಸ್ಥಾಶ್ರಮ' ಎಂದು ಕರೆಯಲಾಗಿದೆ. ವೈದಿಕ ಪರಂಪರೆಯಲ್ಲಿ ವಟು, ಬ್ರಹ್ಮಚಾರಿಯಾಗಿ ಅಧ್ಯಯನನಿರತನಾಗಿ, ಪ್ರಾಪ್ತವಯಸ್ಕನಾದ ಮೇಲೆ, ತನ್ನ ಬದುಕಿನ ಮುಂದಿನ ಯಾತ್ರೆಯನ್ನು ನಿಷ್ಕರ್ಷಿಸುವ ಘಟ್ಟ ಇದು. ಬಹುಪಾಲು ಮಂದಿ 'ಮದುವೆ ನಿಂದು' ಗೃಹಸ್ಥಾಶ್ರಮಿಗಳಾಗುತ್ತಾರೆ. ಎಲ್ಲೋ ಸಾವಿರಕ್ಕೆ ಒಬ್ಬರು ಮುಂದಿನ ಹೆಚ್ಚಿನ ವಿದ್ಯಾರ್ಜನೆಗೆ, ಪರಾವಿದ್ಯೆಸಾಧನೆಗೆ ನಡೆದೇ ಬಿಡುತ್ತಾರೆ. ಬಹುಶಃ ಕೆಳವರ್ಣದವರು, ವಿದ್ಯಾವಂಚಿತರೂ, ಅಕ್ಷರವಂಚಿತರೂ, ಆದ್ದರಿಂದ ಅವರಿಗೆ ಈ ಪರೀಕ್ಷೆ ಎದುರಾಗುವುದಿಲ್ಲ. ಹಿಡಿದ ವೃತ್ತಿ, ಕುಲಕಸುಬು ಹೆಗಲೇರುತ್ತದೆ. ಪ್ರಾಪ್ತವಯಸ್ಕರಾಗುತ್ತಿದ್ದಂತೆಯೇ 'ಗೃಹಸ್ಥಾಶ್ರಮ' ವನ್ನು ಏಕೈಕ ಮಾರ್ಗವಾಗಿ ಅನುಸರಿಸುತ್ತಾರೆ.

ಸರ್ವಜ್ಞನ ವಚನಗಳಲ್ಲಿ ಅಲ್ಲಲ್ಲಿ ಚದುರಿಹೋಗಿರುವ ವಚನಗಳಲ್ಲಿ ಈ ಕುಟುಂಬ ಹಾಗೂ ವೇಶ್ಯಾ ಪದ್ಧತಿಗೆ ಸಂಬಂಧಪಟ್ಟ ವಚನಗಳದೇ ಸಿಂಹಪಾಲು. ಈ ಎರಡೂ ಪ್ರಾಚೀನವಾದ ಸಂಸ್ಥೆಗಳು, (institutions) ವ್ಯವಸ್ಥೆಗಳು, ಸರ್ವಜ್ಞನ ತ್ರಿಪದಿಗಳನ್ನೇ ಹೋಲುವ ಕುರುಳ್‌ಗಳನ್ನು ರಚಿಸಿದ ತಮಿಳಿನ ತಿರುವಳ್ಳುವರ್ ಗೃಹಸ್ಥಾಶ್ರಮವನ್ನು ಎತ್ತಿ ಹಿಡಿಯುತ್ತಾರೆ. ಅದರ ಮಹತ್ವವನ್ನು ಗೋಪುರ ಹತ್ತಿ ಸಾರಿದ್ದಾರೆ. "ಇಲ್ಲಅಮೇನಲ್ಲಅಮ್" ಗೃಹಸ್ಥಾಶ್ರಮವೇ ನಾಲ್ಕು ಆಶ್ರಮಗಳಲ್ಲಿ ಶ್ರೇಷ್ಠವಾದುದು. ಅಸಂಖ್ಯಾತ ಸಾಧುಸಂತರುಗಳಿಗೆ (ತುರ್ರೈವಿಗಲ್=ವಿರಕ್ತರು) ಗೃಹಸ್ಥಾಶ್ರಮವೇ ಆಧಾರ. ಬಹುಶಃ ಸರ್ವಜ್ಞನದು ಅದೇ ಅಭಿಪ್ರಾಯ.

ಮಂಡೆ ಬೋಳಿಸಿಕೊಂಡು, ತುಂಡುಗಂಬಳಿ ಹೊದೆದುಕೊಂಡು, ಕೈಯಲ್ಲಿ ಕಪ್ಪರ ಹಿಡಿದು ನಡೆದುಬಿಟ್ಟರೆ, -- ? -ಯಾವ ಭರವಸೆ? ಯಾರು ಆಧಾರ? 'ತಿರಿವರಿಂ ಸಿರಿವಂತರಾರು?' ಎಂದು ಬೀಗಿದರೂ, ತಿರಿವರಿಗೆ ಮನ್ನಿಸಿ ಇಕ್ಕುವವರು ಬೇಕಲ್ಲ! ಅವರೇ ಗೃಹಸ್ಥರು, ಕುಟುಂಬಿಗಳು.

ಅವರ ಬಗ್ಗೆ ಸಹಜವಾಗಿಯೇ ಸರ್ವಜ್ಞನ ಗಮನ ಹರಿದಿದೆ. ಕುಟುಂಬದ ಶಕ್ತಿ ಯಾವುದು? ದೌರ್ಬಲ್ಯ ಯಾವುದು ಎಂಬುದನ್ನು ಹತ್ತಾರು ಗ್ರಾಮ, ಊರುಗಳನ್ನು ಸುತ್ತಿ, ಅನೇಕ ಪ್ರಾದೇಶಿಕ ಬದುಕಿನ ವೈವಿಧ್ಯಗಳನ್ನು

ಕಣ್ಣಾರೆ ಕಂಡ ಸರ್ವಜ್ಞನದು ಅಪಾರ ಪ್ರತ್ಯಕ್ಷಾನುಭವ ಕುಟುಂಬವನ್ನು ಸಮಗ್ರವಾಗಿ ಹಿಡಿದಿಡುವ ಶಕ್ತಿ, ಪ್ರವೃತ್ತಿಗಳಾವುವು?

ಮೂಲಭೂತವಾಗಿ 'ಕಾಮ', sex– ಅದು ಪ್ರೇಮವಾಗಿ, ವಾತ್ಸಲ್ಯವಾಗಿ, ಕೆಳೆಯಾಗಿ ರೂಪಾಂತರಗೊಂಡು ಕುಟುಂಬವನ್ನು ಕಟ್ಟುತ್ತದೆ, ಬಂಧಿಸಿಡುತ್ತದೆ. ಅದಕ್ಕೆ ಪೂರಕವಾಗಿ ಇತರ ಸಾಧನ–ಸಂಪತ್ತು ಕೂಡಿಕೊಳ್ಳಬೇಕು. ಆಗ ಅದು ಕುಟುಂಬ, ಸಂಸಾರ. ಸರ್ವಜ್ಞನ ಈ ಪ್ರಸಿದ್ಧವಚನ ಎಲ್ಲರಿಗೂ ಎಲ್ಲ ಕಾಲಕ್ಕೂ ಸಲ್ಲುವ ಸಾರ್ವತ್ರಿಕ ಸತ್ಯವನ್ನು ಅನಾವರಣ ಮಾಡಿದೆ, ನೋಡಿ:

ಬೆಚ್ಚನೆಯ ಮನೆಯಾಗಿ ವೆಚ್ಚಕ್ಕೆ ಹೊನ್ನಾಗಿ
ಇಚ್ಚೆಯನು ಅರಿತ ಸತಿಯಾಗೆ ಸ್ವರ್ಗಕ್ಕೆ
ಕಿಚ್ಚುಹಚ್ಚೆಂದ ಸರ್ವಜ್ಞ

ಈ ವಚನವನ್ನು ಅರಿಯದ ಕನ್ನಡಿಗರೇ ಇಲ್ಲ. ಸಾರ್ಥಕ ಅಭಿವ್ಯಕ್ತಿಯೊಡನೆ ಸಾರಭೂತವಾದ ವಿಚಾರ ಇಲ್ಲಿದೆ. ಉತ್ತಮ ಕಾವ್ಯ ಹೀಗಿರಬೇಕು ಎಂಬಂತಹ ಈ ರಚನೆ ಸರ್ವಜ್ಞನ ವಚನಗಳ ಉತ್ತಮಿಕೆಯನ್ನು ಸಾರುವ ಕೆಲವೇ ನೂರು ವಚನಗಳಲ್ಲಿ ಇದೂ ಒಂದು. ಮಳೆ, ಬಿಸಿಲು, ಅನ್ಯರ ಕಿಸುರು ಕಣ್ಣು, ಪ್ರಾಣಿಗಳ ಆಕ್ರಮಣ ಇವುಗಳಿಂದ ರಕ್ಷಿಸಬಹುದಾದ ಬೆಚ್ಚನೆಯ ಮನೆ, ಹಿತವಾದ ಸಂಬಂಧಗಳಿಂದ, ಮುಖದರ್ಶನದಿಂದ, ಸಂವಾದದಿಂದ, ಬಯಲಿಗೆ ಒಪ್ಪದೆ, ಕಾಪಿಡುವ ಮನೆ, ಬೆಚ್ಚನೆಯ ಮನೆ, ಮನೆಯೊಳಗೆ ಮನೆಯೊಡತಿ, ಸತಿ, ಇಚ್ಚೆಯನರಿತು, ಬೇಕು ಬೇಡಗಳಿಗೆ ಸ್ಪಂದಿಸಿ, ನಡೆದಾಡುವ, ನಲಿದಾಡುವ ಅರ್ಧಾಂಗಿ, ಧರ್ಮಪತ್ನಿ ಸಾಕೆ? "ಒಲವೇ ನಮ್ಮ ಬದುಕು, ಅದನೆ ಬಳಸುವೆವು ಅದಕು ಇದಕು ಎದಕು" ಎಂದು ಆಲಾಪಿಸುತ್ತಿರಬಹುದೇ? ಇಲ್ಲ ಜೀವನದ ವಾಸ್ತವಸತ್ಯ ಎದುರಾಗುತ್ತದೆ. 'ವೆಚ್ಚಕ್ಕೆಹೊನ್ನು' ಅದನ್ನು ಗಳಿಸುವ ಮಾರ್ಗ ಶರೀರ ಶ್ರಮ, ಕಾರ್ಯ, ನೂರೆಂಟು ವೃತ್ತಿ ಹೀಗೆ ಕುಟುಂಬ ನಾಲ್ಕು ಗೋಡೆಗಳಲ್ಲಿ ಸೀಮಿತವಲ್ಲ; ಅದನ್ನು ಆಡಿಸುವ ಸೂತ್ರ ಇನ್ನೆಲ್ಲೋ ಇದೆ.

ಇಷ್ಟಾದರೆ ಎಲ್ಲೋ ಇದೆಯೆಂದು ಭ್ರಮಿಸಲಾದ, ಕನವರಿಸಿದ 'ಸ್ವರ್ಗ' ಯಾರಿಗೆ ಬೇಕು? ಅದಕ್ಕೆ 'ಕಿಚ್ಚು ಹಚ್ಚು' ಎಂದು ಆದೇಶಿಸುತ್ತಾನೆ ಸರ್ವಜ್ಞ. ಇಲ್ಲಿ 'ಇಹ'ದ ಇಲ್ಲಿರುವ, 'ಇಲ್ಲಿಸಲ್ಲುವ' ದೃಢವಿಶ್ವಾಸ ವ್ಯಕ್ತವಾಗಿದೆ.

ರೊಕ್ಕವಿಲ್ಲದ ಬಾಳ್ವೆ ಮಕ್ಕಳಿಲ್ಲದ ಮನೆಯು
ಅಕ್ಕರವಿರದ ತವರೂರು – ಇವು ಮೂರು
ದುಕ್ಕ ಕಾಣಯ್ಯ ಸರ್ವಜ್ಞ

ಮೇಲಿನ ವಚನಕ್ಕೆ ಪೂರಕವಾಗಿರುವ ಈ ರಚನೆಯನ್ನು ಮಕ್ಕಳಿಲ್ಲದ ಮನೆ, ಅಕ್ಕರವಿರದ ತವರೂರು ಎಂಬ ಎರಡು ಅಂಶಗಳು ಕೂಡಿಕೊಂಡಿವೆ.

ಹೆಣ್ಣು ಗಂಡು ಕೂಡಿ ಬಾಳಿದರೆ ಸಾಕೇ? "ಮನೆ ತುಂಬ ಮಕ್ಕಳಿರಲವ್ವ" ಎಂದು ಹಂಬಲಿಸಿದ ಜಾನಪದರ ಬದುಕು ಇದು. ಮುಂದಿನ ಆಶೆ ಮಕ್ಕಳ ಕಡೆ, ಇದು ಸೃಷ್ಟಿನಿಯಮವೂ ಹೌದು, ಸಂತಾನಾಭಿವೃದ್ಧಿ, ಗಂಡನ ಮನೆ ಸೇರಿ ಗೃಹ, ಗೃಹಪತಿ, ಕರುಳುಕುಡಿ ಇಷ್ಟಿದ್ದೂ ಹುಟ್ಟಿದ ಮನೆ ಬಿಟ್ಟು ಬಂದ ಹೆಣ್ಣಿಗೆ ತವರಿನ ಹಂಬಲ ತಪ್ಪಿದ್ದಲ್ಲ.

ಯಾವುದೋ ಕಾರಣಕ್ಕೆ ತವರಿನ ಸಂಬಂಧ ಕಡಿದುಬಿದ್ದಿದ್ದರೆ, ಬದುಕು ಸಹ್ಯವೆನಿಸುವುದೇ? ಮುಳ್ಳು ಮುರಿದಂತೆ ಒಳಗೆ ಕೊರೆಯುತ್ತಿರುತ್ತದೆ, "ದುಕ್ಕ". ಇದನ್ನು ಸರ್ವಜ್ಞ ಭಾವಿಸಿದ್ದಾನೆ.

ಎಲ್ಲರಿಗೂ ಈ ಭಾಗ್ಯ ಅನುಕೂಲ ದೊರೆಯದಲ್ಲ!

ಎಷ್ಟೋ ಕುಟುಂಬಗಳಿವೆ. ಬಡತನ, ಮುಂದಿನ ಮಳೆಗಾಲಕ್ಕೆ ಹೆಂಚು ಕೈಯಾಡಿಸಬೇಕೆಂದು, ಮತ್ತೊಂದು ಮಳೆಗಾಲ ಕಾಲಿಟ್ಟಿದೆ. ಅಲ್ಲದೆ ಇಚ್ಛೆಯನರಿವ ಸತಿಯಲ್ಲ ಇವಳು, ಸಣ್ಣಪುಟ್ಟ ವಿಚಾರಕ್ಕೂ ಕ್ಯಾತೆ ತೆಗೆಯುವ 'ಸತೀಮಣಿ'. ಅಂಥ ಕುಟುಂಬದ ಗಂಡಿಗೆ ಅನಿಸುತ್ತದೆ, ಇಂಥ ಸಂಸಾರಕ್ಕಿಂತ ಊರನ್ನು ಒರೆಸಿಬಿಡುವ ಪ್ಲೇಗೋ, ಕಾಲರಾದಂಥ ಮಾರಿ ತನ್ನನ್ನು ಎಳೆದೊಯ್ದಿದ್ದರೂ ಕ್ಷೇಮ ಅಂತ ನಿಟ್ಟುಸಿರುಬಿಡುವಂತಾಗುತ್ತದೆ. ಇಲ್ಲಿ ಕುಟುಂಬದ ಇನ್ನೊಂದು ಮುಖ ಕಾಣುತ್ತದೆ. ಇಷ್ಟೇ ಅಲ್ಲ ಮತ್ತು ಬೇರೆ ಬೇರೆ ಚಿತ್ರಗಳಿವೆ. ಅವು ಆದರ್ಶ ಕುಟುಂಬದ ರಮ್ಯಚಿತ್ರಕ್ಕೆ ವಿಸದೃಶವಾಗಿ ನಿಲ್ಲುತ್ತವೆ. ನೋಡಿ:

ಬರಡಾದ ಹಯನಾಗಿ ಜರಿಯುವ ಮಗನಾಗಿ
ಕರೆದರೋ ಎನದ ಸೊಸೆಯಾದರಾ ಮನೆಯು
ಉರಿಯಲಿದ್ದಂತೆ ಸರ್ವಜ್ಞ

ಬದುಕು ವಿಸ್ತರಿಸಿದೆ, ಹಸು ಕೊಂಡದ್ದಾಯ್ತು ಸಂತೆಯಲಿ, ಮಗ ಪ್ರಾಪ್ತವಯಸ್ಕನಾದ ಮದುವೆ ನಿಂದ, ಸೊಸೆ ಬಂದಳು. ಆ ಹಸು ಬರಡು ಎಂದು ತಿಳಿಯಿತು, ಎಂಥ ನಷ್ಟ! ಮುಖಭಂಗ! ಮಗನೋ ಅವಿಧೇಯ! ಸೊಸೆ ಅಸಹಕಾರಿ, ಕರೆದರೂ 'ಓ' ಎನ್ನದಷ್ಟು ಬಿಗುಮಾನ! ಕಟ್ಟಿಕೊಂಡ ಕನಸೆಲ್ಲ ಭಂಗ! ಇಂಥ ಮನೆಯಲ್ಲಿರುವವರು ಸ್ವರ್ಗಕ್ಕೆ ಕಿಚ್ಚು ಹಚ್ಚಬೇಕಾಗಿಲ್ಲ! ಮನೆಯಲ್ಲೇ ಉರಿ ತಾಂಡವವಾಡುತ್ತದೆ. ಉರಿಯಿಂದ ತಪ್ಪಿಸಿಕೊಳ್ಳಲು ನಿರಂತರ ಚಡಪಡಿಕೆ; ಇದೂ ಕುಟುಂಬ, ಸಂಸಾರ'.

ಬಸುರಾಗದ ಬಾಳ್ವೆಯ ಹೆಣ್ಣಿನ ಅಂತರಂಗದ ಅನುತಾಪ ಮತ್ತೊಂದು ವಚನದಲ್ಲಿಯೂ ಬಂದಿದೆ. ಅದು ಅವಳ ಪಾಲಿಗೆ ಕಡುಬೇಸಗೆಯ ಬಿಸಿಲಂತೆ – ಇತರರ ಮೂದಲಿಕೆ, ಕಳ್ಳನೋಟ, ತಿರಸ್ಕಾರ, ಪ್ರಶ್ನಾವಳಿಗಳು! ಒಂದೇ ಎರಡೇ?

ಮತ್ತೊಂದು ಸುಖಸಂಸಾರ; ಎಲ್ಲ ಇತ್ತು, ಈಗ ಇಲ್ಲ, ಏನು ಗತಿ?

ಮನೆಯ ಯಜಮಾನ, ಅವನ ಒಡವೆ (ಆಸ್ತಿ, ಸಿರಿ) ಇರುವ ತನಕ ಅದು ಮನೆ. ಆತನ ಒಡಲೋ, ಒಡವೆಯೋ ನಷ್ಟವಾದ ಮರುಕ್ಷಣ ಅಂಟಿಕೊಂಡ ನಂಟು, ಸಂಬಂಧ ಎಲ್ಲ ಥಟ್ಟನೆ ಜಾರಿಬಿಡುತ್ತದೆ. ದಾಸರ ಪದ ಕೇಳಿಲ್ಲವೆ! "ಯಾರು ಹಿತವರು ನಿನಗೆ ಈ ಮೂವರೊಳಗೆ?" ಮತ್ತೂ ಒಂದು ಸಂಸಾರ ಚಿತ್ರ ಕಂಡಿದ್ದಾನೆ ಸರ್ವಜ್ಞ.

ಎತ್ತುಗಳೆರಡಾಗಿ ಬತ್ತದ ಹಯನಾಗಿ
ಪುತ್ರರೈದಾಗಿ ಸತಿಯೊಬ್ಬಳಾದರೆ
ನಿತ್ಯಸುಖವಯ್ಯ ಸರ್ವಜ್ಞ

ಸಾಂದರ್ಭಿಕವಾಗಿ ಅರ್ಥೈಸುವುದಾದರೆ ಇದೊಂದು ಕೃಷಿಕನ ಕನಸು. ವ್ಯವಸಾಯ ಮಾಡಲು ಕನಿಷ್ಠ ಒಂದು ಜೊತೆ ಎತ್ತು ಬಂಡವಾಳ, ಮನೆಯಲ್ಲಿ ಹಾಲುಮೊಸರಿಗೆ ಕರೆವ ಆಕಳು, ವ್ಯವಸಾಯದ ಕಾರ್ಯಕ್ಕೆ ಬೆಂಬಲವಾಗಬಲ್ಲ ಐದು ಗಂಡು ಮಕ್ಕಳು, ಇದನ್ನೆಲ್ಲಾ ನಿಭಾಯಿಸುವ ಗೃಹಲಕ್ಷ್ಮಿ ಇದ್ದರೆ ನಿತ್ಯಸುಖ! ಇನ್ನೇನು ಬೇಡ, ಸ್ವರ್ಗಕ್ಕೆ ಕಿಚ್ಚು ಹಚ್ಚಬಹುದು, ಅಲ್ಲವೆ?

ಕುಟುಂಬವೆಂಬುದು ಒಂದು ಅಚ್ಚುಕಟ್ಟಾದ ವ್ಯವಸ್ಥೆ, ಗಂಡು ಹೆಣ್ಣು ದಾಂಪತ್ಯದ ಶಿಸ್ತಿನಲ್ಲಿ ಬಾಳಾಟ ಮಾಡುವುದು, ಪರಸ್ಪರ ನಂಬಿಕೆ, ಒಲವು ಎಂಬ ಮಾಂತ್ರಿಕತೆ (magic) ಯಿಂದ, ಸಂತಾನದ ಬಂಧದಿಂದ ಅನ್ಯಾಕ್ರಮಣಕ್ಕೆ ಬಲಿಯಾಗದ ರಕ್ಷಾಕವಚದಿಂದ ಸ್ವಯಂನಿಷ್ಠರಾಗಿ ಸ್ವಯಂಪೂರ್ಣವಾಗಿರುತ್ತದೆ.

ಇಂಥ ವ್ಯವಸ್ಥೆಯಲ್ಲಿ ಗಂಡಿಗೋ, ಹೆಣ್ಣಿಗೋ 'ಹೊರಚಾಳಿ' ಇದ್ದರೆ ಬದುಕು ಮೂರಾಬಟ್ಟೆಯಾಗುತ್ತದೆ. ಪರಸತಿಗಮನ, ಪರಪುರುಷ ಸಂಬಂಧ – ಎರಡೂ ಸಮನಾಗಿ ದುರಂತಕ್ಕೆ ದಾರಿ ಸಮೆಯುತ್ತದೆ. ಸರ್ವಜ್ಞನ ತಕ್ಕಡಿ, ಮೌಲ್ಯಮಾಪನ ನಿಷ್ಠುರವಾಗಿದೆ. ಭ್ರಷ್ಠ ಗಂಡನ್ನು, ಭ್ರಷ್ಠ ಹೆಣ್ಣನ್ನೂ ಖಂಡಿಸುತ್ತಾನೆ. ನಮ್ಮ ಸಂಪ್ರದಾಯದಲ್ಲಿ ಗಂಡಿಗೆ 'ಕಾಮ'ದ ವಿಚಾರದಲ್ಲಿ ವಿಶೇಷ ರಿಯಾಯಿತಿ ಇದ್ದುದುಂಟು.

ಶಿವಶರಣರು ದಾಂಪತ್ಯದ ಹಿರಿಮೆಯನ್ನು ಒಂದು ಮೌಲ್ಯವಾಗಿ ಸ್ವೀಕರಿಸಿ, ಪ್ರಸಾರ ಮಾಡಿದ್ದು ಸರ್ವಜ್ಞನಿಗೆ ಮಾರ್ಗದರ್ಶಕವಾಗಿರಬೇಕು.

ಪುರುಷಕಂಡರೆ ಕೊಲುವ ಅರಸು ದಂಡವ ಕೊಂಬ
ನರರು ಸುರರೆಲ್ಲ ಮುನಿವರು – ಅಳಿದರೆ
ನರಕ ಪರಸತಿಯು ಸರ್ವಜ್ಞ

ಸುರನಹುಷನು ಶಶಿಯು ಖರಕರರಾವಣನು
ನರಕೀಚಕಾದಿರತಿಮುಖ್ಯ ಬಲಯುತರು
ಪರಸತಿಯಿಂಕೆಡರೆ ಸರ್ವಜ್ಞ

ಸರಸವೆಗ್ಗಳ ಹೊಲ್ಲ ಹೊರಸುಸೂಳೆಗೆ ಹೊಲ್ಲ
ಅರಸಾಳು ಮನೆಗೆ ಬರಹೊಲ್ಲ ಪರಸತಿಯ
ಸರಸವೇ ಹೊಲ್ಲ ಸರ್ವಜ್ಞ

ಪರಸತಿ ಸಂಗದಿಂದ ತಕ್ಷಣ ಒದಗುವ ಲೌಕಿಕ ಹಾನಿ ಹಾಗೂ ಕಾಲಾನುಕ್ರಮದಲ್ಲಿ ದೊರೆಯುವ ಶಿಕ್ಷೆ ಎರಡನ್ನೂ ಗಮನಿಸಿ ಎಚ್ಚರಿಸಿದ್ದಾನೆ ಇಲ್ಲಿನ ಮೊದಲ ವಚನದಲ್ಲಿ.

ಆ ಪರಸತಿಯ ಗಂಡ ಜಾರನನ್ನು ಬಿಟ್ಟಾನೆಯೇ? ಕೊಂದೇ ಬಿಡುತ್ತಾನೆ. ತಕ್ಷಣ ಕೊಲೆ, ಸಾವು, ಕಾನೂನಿನ ಕೈಯು ಉದ್ದವಿದೆ. ಅಂದು ರಾಜದಂಡವನ್ನು ಉಪಯೋಗಿಸಿ, ಅಧರ್ಮಕ್ಕೆ, ಪರಸತಿಗಮನವೆಂಬ ಪಾಪಕ್ಕೆ ಶಿಕ್ಷೆ ವಿಧಿಸುತ್ತಾನೆ. ಇಲ್ಲಿಗೆ ಮುಗಿಯುವುದಿಲ್ಲ. ಇಹಲೋಕದ ಬಂಧುಮಿತ್ರರು, ಪರಲೋಕದ ದೇವತೆಗಳು, ಕೊನೆಗೆ ಮರಣಾಂತ್ಯದಲ್ಲಿ ಈ ಪಾಪಕ್ಕೆ ಏನು ಶಿಕ್ಷೆ ಗೊತ್ತೆ? ನರಕಪ್ರಾಪ್ತಿ.

ಇಹಲೋಕದ ನ್ಯಾಯಶಾಸ್ತ್ರ, ಪರಲೋಕದ ನ್ಯಾಯಶಾಸ್ತ್ರ, ಎರಡೂ ಪರದಾರಾಗಮನವನ್ನು ಮನ್ನಿಸುವುದಿಲ್ಲ.

ಮುಂದಿನ ವಚನದಲ್ಲಿ ಪುರಾಣಪ್ರಸಿದ್ಧರಾದ ವೀರರು, ನಹುಷ, ರಾವಣ, ಕೀಚಕ, ವಾಲಿ ಮೊದಲಾದವರು ಪರಸತಿಯ ದೆಸೆಯಿಂದ ಸರ್ವನಾಶವಾಗಿಲ್ಲವೆ? ಮೂರನೆಯ ವಚನದಲ್ಲಿ ಹೊಲ್ಲದರ ಒಂದು ಪಟ್ಟಿ ಕೊಟ್ಟು 'ಪರಸತಿಯ ಸರಸವೂ ಹೊಲ್ಲ' ಎಂದಿದ್ದಾನೆ.

ಇದೇ ದೃಷ್ಟಾಂತಗಳು ಇತರ ಹತ್ತಾರು ವಚನಗಳಲ್ಲಿ ಪುನರುಕ್ತವಾಗಿದೆ. ಸಾರಾಂಶ: 'ಪರಸತಿಯ ತಬ್ಬಬೇಡ', 'ಪರಸತಿಯ ಕಡೆಗೆ ನೋಡದಿರು', 'ಪರಸತಿಯ ಮುಟ್ಟಬೇಡ' ಎಂದು ಸಾಲದಕ್ಕೆ 'ನಾರಿಯಿಂ ಕೆಟ್ಟ ದಶಕಂಠ; ಪಾಂಡವರು ಜಾರೆಯಿಂ ಕೆಡರೆ ಸರ್ವಜ್ಞ' ಎಂದು ಪಂಚವಲ್ಲಭೆಯಾದ ದ್ರೌಪದಿಗೆ 'ಜಾರೆ' ಪಟ್ಟ ಕೊಟ್ಟುಬಿಟ್ಟಿದ್ದಾನೆ ಸರ್ವಜ್ಞ.

ಇದು ಅವನ ದೃಢವಾದ ಅಭಿಪ್ರಾಯ:

ಅನ್ಯಸತಿಯನು ಕಂಡು ತನ್ನ ಹೆತ್ತವಳೆಂದು
ಮನ್ನಿಸಿ ನಡೆವ ಪುರುಷಂಗೆ ಇಹಪರದಿ
ಮುನ್ನ ಭಯವಿಲ್ಲ ಸರ್ವಜ್ಞ

ಪರದಾರಾಗಮನವನ್ನು ನಮ್ಮ ಪರಂಪರೆ ಪಂಚಮಹಾಪಾತಕಗಳಲ್ಲೊಂದು ಎಂದು ಪರಿಗಣಿಸಿದೆ.

ಇದು ಕೇವಲ ನೀತಿ, ಅನೀತಿ, ವೈಯುಕ್ತಿಕ ಇಚ್ಛೆ ಅನಿಚ್ಛೆಗೆ ಸಂಬಂಧಿಸಿದುದು ಮಾತ್ರವಲ್ಲ. ಮನೆಯಿಂದ ಆರಂಭವಾಗುವ ಕಲಹ ಎರಡು ಕುಟುಂಬಗಳಲ್ಲಿ ಅಶಾಂತಿಯನ್ನು ಕೆರಳಿಸಿ, ದ್ವೇಷ, ಸೇಡು, ಪ್ರತಿಸೇಡು ಹೀಗೆ

ಮರಿಯಿಕ್ಕುವ ಪಾತಕಪರಂಪರೆಯಾಗಿ ಪ್ರಕಾರಾಂತದಲ್ಲಿ ಸಾಮಾಜಿಕ ಅಸ್ವಸ್ಥತೆಗೆ ದಾರಿಯಾಗುತ್ತದೆ. ಆದ್ದರಿಂದಲೇ ಸರ್ವಜ್ಞ ಪರದಾರಾಗಮನದ ಬಗ್ಗೆ ತೀವ್ರವಾದ ಆಕ್ಷೇಪವನ್ನು ವ್ಯಕ್ತಪಡಿಸಿದ್ದಾನೆ.

ಪಾತಿವ್ರತ್ಯ ನಮ್ಮ ಪರಂಪರೆಯಲ್ಲಿ ಒಂದು ಒಪ್ಪಿತ ಮೌಲ್ಯ. ಪಂಚಪತಿವ್ರತೆಯರ ನಾಮಸ್ಮರಣೆ ಒಂದು ಧಾರ್ಮಿಕ ವಿಧಿಯಾಗಿದೆ, ಹೆಣ್ಣುಮಕ್ಕಳಿಗೆ. ಪಾತಿವ್ರತ್ಯ ಇನ್ನೊಂದು ಅತಿಗೆ ಮುಟ್ಟಿದರೆ ಸತಿ ಹೋಗುವುದು, ಸಹಗಮನ ಪದ್ಧತಿ ಇತ್ಯಾದಿಗಳಿಗೆ ದಾರಿಯಾಯಿತು.

ಸರ್ವಜ್ಞ ಗಂಡಿಗೆ ವಿಧಿಸಿದ ನಿಯಮವನ್ನು ಹೆಣ್ಣಿಗೂ ವಿಧಿಸುತ್ತಾನೆ. ಅದಕ್ಕೆ ಪರಂಪರೆಯ ಬೆಂಬಲವಿರುವುದರಿಂದ ಸುಲಭವಾಗಿ ಸ್ವೀಕೃತವಾಗುತ್ತದೆ.

ಹಣಗುಣವು ಬಲವುಳ್ಳ ರಣಧೀರರಾವಣನ
ತೃಣವೆಂದು ಬಗೆದ ಪತಿವ್ರತೆ ಸೀತೆಗೆ
ಎಣೆಯಾರು ಹೇಳು ಸರ್ವಜ್ಞ

ಸೀತೆಯನ್ನು ಆದರ್ಶವಾಗಿ ಕೊಟ್ಟಿದ್ದಾನೆ. ಮುಂದುವರಿದು 'ಲೇಸು' ಮಾದರಿಯ ಸುಲಭ ರಚನೆಯೊಂದರಲ್ಲಿ "ಪತಿವ್ರತೆಯ ಬಾಳು ಲೇಸೆಂದ ಸರ್ವಜ್ಞ" ಎಂದಿದ್ದಾನೆ. ಹೇಗೆ ಗಂಡು ಅನ್ಯಸತಿಯನ್ನು ಹೆತ್ತಾಕೆ ಎಂದು ಭಾವಿಸಬೇಕೋ ಹಾಗೆಯೇ ಅನ್ಯಪತಿಯನ್ನು ಕಂಡ ಪತಿವ್ರತೆ "ತನ್ನ ಪಡೆದವನೆಂದು" (ತಂದೆ) ಭಾವಿಸಬೇಕು. ಅಂಥ ಸತಿಗೆ "ಹೊನ್ನಿನ ಮನೆ" ಲಭ್ಯವಾಗುತ್ತದೆ ಎಂದು ಆಶ್ವಾಸನೆ ಕೊಡುತ್ತಾನೆ.

ಹೆಣ್ಣು, ಗಂಡು ಇಬ್ಬರನ್ನೂ ಒಂದೇ ನ್ಯಾಯಾಧಿಕರಣದ ಮುಂದೆ ನಿಲ್ಲಿಸಿ, ಸಮಾನವಾಗಿ ಕಂಡಿದ್ದಾನೆ, ಇದರಲ್ಲಿ ಹೊಸತನವಿದೆ, ಪರಂಪರೆಯನ್ನು ತಿದ್ದುವ, ಪರಿಷ್ಕರಿಸುವ ಸಾಹಸವಿದೆ ಎನ್ನಬಹುದು.

ಕುಟುಂಬದಲ್ಲಿ ಗಂಡು ಹೆಚ್ಚೋ, ಹೆಣ್ಣು ಹೆಚ್ಚೋ – ಈ ಪ್ರಶ್ನೆಯನ್ನು ಸರ್ವಜ್ಞ ಸಾವಧಾನವಾಗಿ ಪರಿಶೀಲಿಸಿ ತೀರ್ಪುಕೊಡುತ್ತಾನೆ. ಪುರುಷಪ್ರಧಾನವಾದ ಭಾರತೀಯ ಕೌಟುಂಬಿಕ ಜೀವನವನ್ನು (ಬಹುಶಃ ಪ್ರಪಂಚದ ಎಲ್ಲ ಜನಾಂಗಗಳಲ್ಲೂ ಈ ಸ್ಥಿತಿ ಹೀಗೆಯೇ ಇದೆ). ಹೆಣ್ಣು ನಿರಂತರ ಹಲವು ಬಗೆಯ ಶೋಷಣೆಗೆ ಒಳಗಾದವಳು.

"ಹೆಣ್ಣು ಸರ್ವತಾ ಸ್ವಾತಂತ್ರ್ಯಕ್ಕೆ ಅನರ್ಹಳು, ಬಾಲ್ಯದಲ್ಲಿ ತಂದೆತಾಯಿಗಳ ಹಂಗಿನಲ್ಲಿ, ಯೌವ್ವನದಲ್ಲಿ ಪತಿಯ ಅಂಕೆಯಲ್ಲಿ, ಮುಪ್ಪಿನಲ್ಲಿ ಮಗನ ವಶದಲ್ಲಿರಬೇಕು" ಎಂಬ ಪ್ರಸಿದ್ಧ ಲೋಕೋಕ್ತಿ (ಮನುಧರ್ಮಶಾಸ್ತ್ರ) ಯನ್ನು ಯಾರು ತಾನೇ ಕೇಳಿಲ್ಲ.

ಸಾವಿರಾರು ವರ್ಷಗಳಲ್ಲಿ ಅನೇಕ ಸಾಮಾಜಿಕ ಕ್ರಾಂತಿ, ಬೆಳವಣಿಗೆಗಳು ಜರುಗಿದರೂ ಹೆಣ್ಣಿನ ಸ್ಥಿತಿ ಇಂದಿಗೂ ಹೆಚ್ಚು ಬದಲಾಗಿಲ್ಲ. ಸರ್ವಜ್ಞನಾದರೋ ನಾಲ್ಕಾರು ವಚನಗಳಲ್ಲಿ ಮನೆವಾರ್ತೆಯಲ್ಲಿ (ಕುಟುಂಬ) ಹೆಣ್ಣಿನ ಸ್ಥಾನವನ್ನು ಗುರುತಿಸಿಕೊಂಡಾಡಿದ್ದಾನೆ.

ಹೆಂಡರಿಲ್ಲದವನ ಮನೆವಾರ್ತೆ ತಲೆಹೋದ ಮುಂಡದಂತೆ

ಮನೆವಾರ್ತೆಯಲ್ಲಿ ಹೆಣ್ಣಿನ ಸ್ಥಾನ, ಪೂಜೆಯಲಿ ಲಿಂಗಕ್ಕೆ, ತೋಟದಲ್ಲಿ ಗಂಗೆಗೆ ಇರುವಂಥ ಸ್ಥಾನ.

ಕುಟುಂಬ ಎಂಬುದು ಹೆಂಡರಿಲ್ಲದಿದ್ದರೆ ತಲೆ ಇಲ್ಲದ ಮುಂಡದಂತೆ ಅಪ್ರಯೋಜಕ, ನಿರ್ಜೀವ ಎಂದು ಎರಡು ವಚನಗಳಲ್ಲಿ ಪುನರುಕ್ತಿಯನ್ನು ಲಕ್ಷಿಸದೆ, ಅವಧಾರಣೆಯೊಡನೆ ಹೇಳಿದ್ದಾನೆ. ಅಲ್ಲಿಗೆ ಕುಟುಂಬವೆಂಬ ಶರೀರಕ್ಕೆ ರುಂಡ ಹೆಣ್ಣು; ಮುಂಡ ಗಂಡು" ಎಂದು ಉಪಮಾನದಿಂದಾಗಿ ಹೆಣ್ಣಿಗೆ ಹಿರಿದಾದ ಮಹತ್ವ ಕೊಟ್ಟಂತಾಯಿತು. ಅಂಥ ವಿವಾಹಿತ ಮಹಿಳೆಗೆ ತಾಯ್ತನ ಒಂದು ಕೋಡು, ಗೌರವ, ಸಿರಿ. "ಬಸುರಾಗದವಳ ಬಾಳುವೆ', 'ಕಂದನಿಲ್ಲದವಳ ಮನೆವಾರ್ತೆ' ಎಂಬ ಮಾತುಗಳು ಸಂತಾನಹೀನತೆಗೆ ಹೆಣ್ಣನ್ನೇ ಗುರಿಮಾಡುವ ಸಾಂಪ್ರದಾಯಿಕ ದೃಷ್ಟಿಕೋನದಿಂದ ಭಿನ್ನವಾಗಿಲ್ಲ. ಅದರಲ್ಲಿ ಗಂಡಿನ ಪಾತ್ರವೂ, ಹೆಣ್ಣಿನ ಫಲವಂತಿಕೆಯಷ್ಟೇ ಕಾರಣವಾಗುತ್ತದೆ ಅಥವಾ 'ಪಾಪವೋ, ಪುಣ್ಯವೋ, ಕರ್ಮಫಲವೋ' ಕಾರಣವಾದರೆ, ಅದನ್ನು ಹೆಣ್ಣಿನ ತಲೆಗೆ ಮಾತ್ರ ಹಚ್ಚಿ ಪಾರಾಗದೆ, ಗಂಡು ಸಹ ಅದಕ್ಕೆ ಜವಾಬ್ದಾರ ಎಂಬ ವೈಜ್ಞಾನಿಕ ತಿಳಿವು ಇಲ್ಲೆಲ್ಲೂ ಕಾಣುವುದಿಲ್ಲ. ದಾಂಪತ್ಯದಲ್ಲಿ ವಿಶ್ವಾಸ, ಪ್ರೇಮ, ಅಡಿಗಲ್ಲು. ಮಾಂಗಲ್ಯಧಾರಣೆಯೋ, ಸಪ್ತಪದಿಯೋ 'ವಿಧಿ'ಗಳು ಅಷ್ಟೆ. ಪರಸ್ಪರ ಪ್ರೀತಿ, ವಿಶ್ವಾಸ ದಾಂಪತ್ಯ ಜೀವನದ ಉಸಿರು, ಪ್ರಾಣ.

ಆದ್ದರಿಂದ ದಾಂಪತ್ಯದಲ್ಲಿ ಒಲವಿನ ಸ್ಥಾನವನ್ನು ಕುರಿತು ಸರ್ವಜ್ಞ ನ್ಯಾಯವಾಗಿಯೇ ವಿಚಾರ ಮಾಡಿದ್ದಾನೆ. ಪ್ರೀತಿಸಿ ಮದುವೆಯಾದರೂ, ಮದುವೆಯಾಗಿ ಪ್ರೀತಿಸಿದರೂ ಪ್ರೀತಿಯೇ ಜೀವ, ಭಾವ, ಧಾರಣ ಶಕ್ತಿ. "ಒಲ್ಲದವಳೊಡನೆ" ಒಡನಾಟ, "ಒರೆಗದ" ಹೆಣ್ಣಿನೊಡನೆ ಸಲ್ಲಾಪ, ಚಿತ್ತವಿಲ್ಲದವಳ ಒಡನಾಟ "ಕಲ್ಲು ಪುತ್ಥಳಿಯ ಅಪ್ಪಿದಂತೆ ಸುಖವಿಲ್ಲ" – ಬರಿ ತ್ರಾಸ, ಆಯಾಸ, ಬಲಾತ್ಕಾರದ ಕೂಟ, ಬೇಟ ಸಲ್ಲದು ಎಂಬದು ಭಾವ. ಹೆಣ್ಣು ಸಂಯಮದಿಂದ ಇರಬೇಕು. ಕಂಡುದನು ಅರಿದು ಬಳುಸುವ ಅಂಗನೆಯಾಗಿರಬೇಕು, ಕುಟುಂಬದ ನೆಮ್ಮದಿ, ಸಾರ್ಥಕ್ಯ ನಿಂತಿರುವುದು ಹೆಣ್ಣಿನ ಗುಣದಿಂದ. ಅಪವ್ಯಯ ಮಾಡದೆ, ಅತ್ಯಾಸೆ ಮಾಡದೆ ತಂದದ್ದರಲ್ಲಿ ಸಂಸಾರ ನಿರ್ವಹಿಸುವ ಹೆಣ್ಣು ಕುಟುಂಬವನ್ನು ರಕ್ಷಿಸುತ್ತಾಳೆ. ಇದು ಎಲ್ಲ ಕಾಲಕ್ಕೂ ಸಲ್ಲುವ ನೀತಿವಾಕ್ಯವೇ!

ಕುಟುಂಬದಲ್ಲಿ ಹೆಣ್ಣಿನಿಂದ ನಿರೀಕ್ಷಿಸುವ ಸಾಧುವಾದ ವರ್ತನೆ, ನಡವಳಿಕೆಯ ಬಗ್ಗೆ ಸರ್ವಜ್ಞನ ಸೂಚನೆಗಳು ವಿಚಾರಾರ್ಹವಾಗಿವೆ. ಅಲ್ಲಿ ಪೂರ್ವಾಗ್ರಹವಿಲ್ಲ.

### ೩.೩ ಸರ್ವಜ್ಞನ ವಚನಗಳಲ್ಲಿ ಸ್ತ್ರೀ ಅಥವಾ ಹೆಣ್ಣು

"ಸ್ತ್ರೀಪದ್ಧತಿ" ಎಂಬ ಶೀರ್ಷಿಕೆಯಡಿ ಸಂಕಲಿತವಾಗಿರುವ ಅವನದೆನ್ನುವ ವಚನಗಳಲ್ಲಿ ಕಾಣುವ 'ಸ್ತ್ರೀನಿಂದೆ' ಕೇವಲ ಸಾಂಪ್ರದಾಯಿಕ. ಸ್ತ್ರೀಕುಲದ ಬಗ್ಗೆ ಪುರುಷವರ್ಗ ತಲತಲಾಂತರದಿಂದ ಮಾಡುತ್ತಿರುವ ಆಕ್ಷೇಪ, ವ್ಯಕ್ತಿಗತ ದೌರ್ಬಲ್ಯಗಳು, ಆಶೆ ಆಮಿಷಗಳು, ಕೊರತೆಗಳನ್ನು ಇಡೀ ಸ್ತ್ರೀಸಮೂಹಕ್ಕೆ ಅನ್ವಯಿಸಿ ಸಾಧಾರಣೀಕರಣ ಮಾಡುವುದು ದುಷ್ಟಚಿಂತನೆ. ಇದೇ ರೀತಿ ಪುರುಷವರ್ಗದ ಬಗ್ಗೆ ದೋಷಾರೋಪಣಾ ಪಟ್ಟಿ

ಸಲ್ಲಿಸುವ ಅವಕಾಶ ದೊರೆತರೆ, ಯಾವ ಹೆಣ್ಣು ಅದನ್ನು ಸಂತೋಷದಿಂದ ಮಾಡಿಯಾಳು! ಸೀತೆ-ಶೂರ್ಪಣಖಿಯರಿರುವಂತೆ ರಾಮ-ರಾವಣರೂ ಇದ್ದಾರೆ ಎಂಬ ತಿಳುವಳಿಕೆ ಇದ್ದರೆ ಇಡೀ ಒಂದು ವರ್ಗವನ್ನು ಅಥವಾ 'ಲಿಂಗ'ವನ್ನು ನಿಂದೆಗೆ ಗುರಿಮಾಡುವ ಕ್ರೌರ್ಯ ತಪ್ಪುತ್ತದೆ. ಸ್ತ್ರೀ ಬಗ್ಗೆ ಸಾರಾಸಗಟಾಗಿ ಬಿಡುಬೀಸಾಗಿ ಸರ್ವಜ್ಞನೆಸೆದ ಬಾಣಾವಳಿಗಳನ್ನು ಗಮನಿಸೋಣ:

ಹೆಣ್ಣಿನ ಹೃದಯದ, ತಣ್ಣಗಿನ ನೀರಿನ
ಬಣ್ಣಿಸುತ ಕುಣಿವ ಕುದುರೆಯ, ನೆಲೆಯಂಬ
ಲಣ್ಣಗಳು ಯಾರು ಸರ್ವಜ್ಞ?

ನಂಬಿದಂತಿರಬೇಕು, ನಂಬದಲೆ ಇರಬೇಕು
ಇಂಬರಿದು ಎಚ್ಚರಿರಬೇಕು, ಹೆಣ್ಣನು
ನಂಬಿದವ ಕೆಟ್ಟ ಸರ್ವಜ್ಞ

ಇಡೀ ಸ್ತ್ರೀಕುಲವನ್ನೇ ಹೀಗೆ ಅವಹೇಳನ ಮಾಡುವುದು ಸಾಂಪ್ರದಾಯಿಕ ಪುರುಷ ಪ್ರಧಾನ ಸಮಾಜದ ಧೋರಣೆ. ಇಲ್ಲಿ ಸತ್ಯಾನ್ವೇಷಣೆಗೆ ಅವಕಾಶವಿಲ್ಲ. ಇದೇ ಆಲೋಚನಾ ಲಹರಿ ಸ್ತ್ರೀನಿಂದಾಪದ್ಧತಿಯಲ್ಲಿಯೂ ಮುಂದುವರೆದಿದೆ.

ಹೆಣ್ಣನ್ನು ಹುಚ್ಚುನಾಯಿಗೆ ಹೋಲಿಸಲಾಗಿದೆ; ಮುಂದುವರೆದು,

ಆಲಕ್ಕೆ ಹೂವಿಲ್ಲ, ಶೀಲಕ್ಕೆ ಸರಿಯಿಲ್ಲ
ನಾಲಗೆಯಲೊಂದು ಎಲುವಿಲ್ಲ ದೃಢಮನವು
ಬಾಲೆಯರಿಗಿಲ್ಲ ಸರ್ವಜ್ಞ ಎನ್ನಲಾಗಿದೆ.

ಇದೇ ವಚನವನ್ನು ಹಾಗೇ ಉಳಿಸಿಕೊಂಡು, ಕೊನೆಯ ಸಾಲನ್ನು ಮಾತ್ರ ತಿದ್ದಿ

ದೃಢಮನವು,
ಗಂಡುನಾಯಿಗಿಲ್ಲ ಸರ್ವಜ್ಞ ಎಂದುಬಿಡಬಹುದಲ್ಲವೆ?

ಹೊರಚಾಳಿ, ಇಟ್ಟುಕೊಳ್ಳುವುದು, ಸೂಳೆಯರ ಸಹವಾಸ ಮಾಡುವುದು, ಇಬ್ಬರನ್ನೋ, ಮೂವರನ್ನೋ ಮದುವೆಯಾಗುವುದು, ಗಂಡಿನ ಜನ್ಮಜಾತ ಹಕ್ಕೇ? ನಮ್ಮ ಗಂಡುದೇವರುಗಳಲ್ಲಿ ಯಾರು ಏಕಪತ್ನಿವ್ರತಸ್ಥರು? (ಎಲ್ಲೋ ಒಬ್ಬ ಶ್ರೀರಾಮಚಂದ್ರ ಇರಬಹುದು). ಹರಿಗೂ ಕನಿಷ್ಠ ಎರಡು ಬೇಕು, ಹರನಿಗೂ ಎರಡು ಬೇಕು. ಇನ್ನು ನಮ್ಮ ಋಷಿಗಳ ಪಾಡಂತೂ ಹೇಳಸಲ್ಲ! ವಿಶ್ವಾಮಿತ್ರನೇ ಸಾಕಲ್ಲ, "ಗಂಡುಸೂಳೆ" ಎನಿಸಿಕೊಳ್ಳಲು! ಆದ್ದರಿಂದ ಈ ಹೊರಚಾಳಿ ಪ್ರಾಣಿಮಾತ್ರಕ್ಕೆ ಸಹಜ ದೌರ್ಬಲ್ಯ ಎಂದು ಅರಿಯಬೇಕು.

"ಸ್ತ್ರೀನಿಂದಾಪದ್ಧತಿ"ಯಲ್ಲಿ ಸೇರ್ಪಡೆಯಾಗಿರುವ ಅನೇಕ ವಚನಗಳಲ್ಲಿ ಹೆಣ್ಣಿನ ನಿಂದೆ ಎದ್ದು ಕಾಣುತ್ತದೆ. ಇಲ್ಲಿ ಸ್ಥಾಯಿಭಾವ "ಹೆಣ್ಣೆಂಬ ನಾಯ ನಂಬುವರೇ?" ಎಂಬುದೇ!

"ಸಂಚು ಬೇರೆ, ಅವಳ ಮನ ಬೇರೆ", "ಹೆಣ್ಣಿನ ನೆಲೆಯನು ಆರು ಬಲ್ಲ?", "ಗುಂಡಿನೀರೊಳಗೆ ಕಿರಿಮೀನ ಹೆಜ್ಜೆಯನು ಕಂಡವನಾರು?"

ಹೆಣ್ಣಿನ ಗುಣವರಿಯೆ ಕಣ್ಣಿಗದು ಕಾಂಬುದೇ!
ಸುಣ್ಣದ ಕಲ್ಲಿನೊಳಡಗಿ ಸುಡುಗಿಚ್ಚು
ತಣ್ಣಗಿದ್ದಂತೆ ಸರ್ವಜ್ಞ

ಮುಂದುವರೆದು ಒಂದು ವಚನದಲ್ಲಿ ಸ್ವಲ್ಪ ಮೃದು ಧೋರಣೆ, ಅನುಕಂಪ ವ್ಯಕ್ತವಾಗಿದೆ:

ಹೆಣ್ಣು ಮುನಿದರೆ ತಿದ್ದುವಣ್ಣಂಗಳ ನಾಕಾಣೆ
ಹೆಣ್ಣೊಳಮೃತವು ವಿಷವುಂಟು ಉಣಬಲ್ಲ
ಅಣ್ಣಗಳು ಯಾರು ಸರ್ವಜ್ಞ

ಹೆಣ್ಣಲ್ಲಿ ವಿಷವಿರುವಂತೆ ಅಮೃತವೂ ಇದೆ, ಅದನ್ನು ಕಂಡುಕೊಳ್ಳಬೇಕು, ಸ್ವೀಕರಿಸಬೇಕು ಎಂಬ ವಿವೇಕ ಇಲ್ಲಿ ತಲೆದೋರಿದೆ.

ಇವನ ಮನೋದಿಗಂತವನ್ನು ವಿಸ್ತರಿಸಿದೆ. ಇವನ ಒಳಬದುಕನ್ನು ಪ್ರಭಾವಿಸಿದ ವಚನಕಾರರು ಹೆಣ್ಣಿನ ಬಗ್ಗೆ ತಳೆದ ಆರೋಗ್ಯಕರ ನಿಲುವು ಏಕೆ ಇವನಿಗೆ ಪಥ್ಯವಾಗಲಿಲ್ಲ?

"ಹೆಣ್ಣು ಸಾಕ್ಷಾತ್ ಕಪಿಲಸಿದ್ಧಮಲ್ಲಿಕಾರ್ಜುನ ನೋಡಾ" ಎಂಬ ಮಾತಾಗಲೀ,

"ಹೆಣ್ಣು ಮಾಯೆಯಲ್ಲ, ಮನದ ಮುಂದಣ ಆಶೆಯೇ ಮಾಯೆ ಕಾಣಾ ಗುಹೇಶ್ವರಾ" ಎಂಬ

ಕ್ರಾಂತಿಕಾರಕ ವಿಚಾರಸ್ಫೋಟ, ಇವನನ್ನು ಪ್ರಭಾವಿಸಲಿಲ್ಲವೇ? ಗೊಡ್ಡುವೈದಿಕನಂತೆ ಸ್ತ್ರೀನಿಂದೆ ಮಾಡುತ್ತಾ ಸಂಭ್ರಮಿಸುವ ಸರ್ವಜ್ಞ ಶೋಚನೀಯವಾಗಿ ಸೋತಿದ್ದಾನೆ.

ಈ ಸ್ತ್ರೀಕುಲದ ಒಂದು ವಿಕಾರವೇ ಆಗಿರುವ ವೇಶ್ಯಾವೃತ್ತಿಯ ಬಗ್ಗೆ ಸಂಭ್ರಮದಿಂದ ಸರ್ವಜ್ಞ ನಾಲಗೆ ಹರಿಬಿಟ್ಟಿದ್ದಾನೆ. ಅದಕ್ಕೆ ಮುನ್ನ ಜಾರೆಯರ ಬಗ್ಗೆ ಅವನ ನುಡಿಗಳನ್ನು ಆಲಿಸೋಣ;

ಜಾರೆಯರು ಎಂದರೆ, ಗಂಡನೊಡನಿದ್ದು, ನೀತಿಯಲ್ಲಿ ಜಾರಿದವರು, ಅನ್ಯರಲ್ಲಿ ಆಸಕ್ತರು, ಅಂಥ ಹಾದರ ಸ್ತ್ರೀಯರ ನಡತೆ, ಹಾವಭಾವಗಳ ಬಗ್ಗೆ ವಿವರವಾಗಿ ಹತ್ತಾರು ವಚನಗಳಲ್ಲಿ ವಿವರಿಸಿದ್ದಾನೆ.

ಪೋಲಿಗಂಡಸರು ಇದ್ದಂತೆ ಪೋಲಿ ಹೆಂಗಸರು ಇದ್ದಿರಬಹುದು. ಇವರು ಚಪಲಚಿತ್ತರು, ಅವಳ ವರ್ತನೆಗಳು ಅವಳ ಅವಗುಣವನ್ನು ಬಿಚ್ಚಿ ತೋರಿಸುತ್ತದೆ.

'ಕಟ್ಟೆಯಲಿ ಕೂತು ಕೆಲೆಯುವಳು', 'ತಲೆಗುತ್ತಿನೆಲವ ಬರೆಯುವಳು ಹಾದರಕೆ', 'ಬೀಸುವ ನೆಲದಿಂದ ದೇಶವನು ಕಾಳುವಳು', 'ಕುಟ್ಟುವ ನೆವದಿಂದ ರಟ್ಟೆಯನು ತಿರುಹುವಳು'.

ಕೆಂಬಾಯಿ ತೆರೆಯುತ್ತಾ, ಕೆಂಬಲ್ಲ ತೋರುತ್ತಾ
ಕಂಬವನೊರಗಿ ಮುರುಕಿದಳು ಹಾದರದ
ಬೊಂಬೆ ಕಾಣಯ್ಯಾ ಸರ್ವಜ್ಞ

ಎಲ್ಲಾ ಕಾಲದಲ್ಲೂ ಇರಬಹುದಾದಂತೆ ಅಪ್ರಮಾಣಿಕ ಹೆಂಡತಿ ಹೇಗೆ ಅಪಾಯಕಾರಿ, ಕುಟುಂಬ ವಿಘಟನೆಗೆ ದಾರಿ ಎಂಬುದನ್ನು ಸರ್ವಜ್ಞ ತೋರಿಸಿಕೊಟ್ಟು ತಿದ್ದುವುದು ಅವನ ಉದ್ದೇಶವಿರಬೇಕು. ಆದರೆ ಅದನ್ನು ಮೀರಿ ಅತಿಕ್ರಮಿಸಿ ಜಾರೆಯರ ಲಕ್ಷಣ, ಅವರ ಹಾವಭಾವಗಳ ವರ್ಣನೆಯಲ್ಲಿ ಖುಷಿ ಪಡುತ್ತಾ ನಿಂತು ನಮ್ಮ ಜಾನಪದ ಕವಿ ಬಹುಶಃ ಗರತಿಯಾದವಳು ಇವನ ಜಾರೆಯ ವರ್ಣನೆಯನ್ನು ಕೇಳಿ ಅಂಥ ಹಾವಭಾವಗಳಿಂದ ಬೆಡಗು ಬಿನ್ನಾಣಗಳಿಂದ ದೂರಾಗಬಹುದು. ತಮ್ಮ ವರ್ತನೆಯನ್ನು ತಿದ್ದಿಕೊಳ್ಳಬಹುದು.

ಪ್ರಾಚೀನ ಪಠ್ಯಗಳಲ್ಲಿ ಉಕ್ತವಾಗಿರುವ ಸ್ತ್ರೀಗಳ ಭೇದವನ್ನು ಇಲ್ಲಿ ನಿರೂಪಿಸಲಾಗಿದೆ. ಹಸ್ತಿನಿ, ಚಿತ್ತಿನಿ, ಪದ್ಮಿನಿ ಎಂಬ ಸ್ತ್ರೀಯರ ದೇಹಲಕ್ಷಣ ಸ್ವಭಾವಗಳ ವರ್ಣನೆ ಇದೆ. ಇದು ಸರ್ವಜ್ಞ ಕೃತವೋ, ಪ್ರಕ್ಷಿಪ್ತವೋ ನಿರ್ಧಾರವಾಗಬೇಕಾಗಿದೆ. (ಎಲ್. ಬಸವರಾಜು ಅವರು ಸಂಪಾದಿಸಿರುವ ಸರ್ವಜ್ಞ ವಚನ ಸಂಗ್ರಹದಲ್ಲಿ ಈ ಎಲ್ಲ ವಚನಗಳನ್ನು ಸರ್ವಜ್ಞಕೃತ ವಚನಗಳಲ್ಲಿ ಸೇರಿಸಿಲ್ಲ ಎಂಬುದನ್ನು ಗಮನಿಸಬೇಕು). ಕಾಮಶಾಸ್ತ್ರ ಪ್ರವೀಣನಾದ ರಸಿಕನೊಬ್ಬ ಇದನ್ನು ರಚಿಸಿ ಸರ್ವಜ್ಞನ ತಲೆಗೆ ಅಂಟಿಸಿರಬಹುದು.

ಭಾರತೀಯ ಸಮಾಜದಲ್ಲಿ ವಿಧವೆಯ ಸ್ಥಾನ ಶೋಚನೀಯವಾದುದು. ಐದೆ ಅಥವಾ ಮುತ್ತೈದೆ, ಸುಮಂಗಲಿಯ ಪಾತ್ರವನ್ನು ಕೊಂಡಾಡುವ ಸಾಂಸ್ಕೃತಿಕ ಪರಂಪರೆ 'ವಿಧವೆ'ಯನ್ನು ತಿರಸ್ಕಾರದಿಂದ ನೋಡುತ್ತದೆ. ಬಹುಶಃ ಮಹಾಭಾರತದ ಕುಂತಿದೇವಿ, ಇತಿಹಾಸಪ್ರಸಿದ್ಧ ಅತ್ತಿಮಬ್ಬೆಯರು ಅಪವಾದವೇನೋ! ಇಲ್ಲಿ ವಿಧವೆಯರಿಗೆ ಉಪಯೋಗಿಸಿರುವ ಶಬ್ದವೇ ಅಸಹ್ಯವಾಗಿದೆ; ಬೈಗುಳವಾಗಿದೆ. ಮುಂಡನ ಮಾಡಿಕೊಳ್ಳಬೇಕಾಗಿರುವುದರಿಂದ ಆಕೆ "ಮುಂಡೆ" ಅಷ್ಟೆ.

ಅವಳಿಗೆ ವಿಧಿಸಿರುವ ನಿಯಮಗಳನ್ನು ನೋಡಿ:

ಮುಂಡೆ ಬಾಯಿಯು ಹೇತ ಕುಂಡೆಯಂತಿರಬೇಕು
ಮುಂಡೆ ಮುಂಬಲ್ಲ ಸುಲಿದರಿನ್ನೊಬ್ಬನ
ಕೊಂಡಳೆಂದರಿಗೆ ಸರ್ವಜ್ಞ ಎಂದೂ

"ಮುಂಡೆಯ ಮುಂಡೆ ನೂಲುಂಡೆಯಂತಿರಬೇಕು" ಎಂದು, "ನಕ್ಕಿಹರೆ ಮುಂಡೆಯರು ಠಕ್ಕರೆಂದರಿಯುವುದು" ಎಂದು ನಮ್ಮ ಜಾನಪದ ಬ್ರಹ್ಮ ಕಠೋರವಾದ ಶಾಸನ ಬರೆದಿದ್ದಾನೆ. ಇಲ್ಲಿ ಸರ್ವಜ್ಞ ಸಂಪ್ರದಾಯದ ಕೊಚ್ಚೆಯಿಂದ ಹೊರಬರಲಾರದೆ ಹೆಳವನಂತೆ, ಮೂರ್ಖನಂತೆ ಭಾಸವಾಗುತ್ತಾನೆ.

ವಿಧವೆ ಅಲಂಕರಿಸಿಕೊಳ್ಳಬಾರದು, ನಗಬಾರದು, ಸದಾ ಬೋಳಿಯಾಗಿರಬೇಕು ಇತ್ಯಾದಿ ಕ್ರೂರವಿಧಿಗಳಿಗೆ ಸರ್ವಜ್ಞನಂಥ ಕ್ರಾಂತಿಕಾರಿ ಸುಧಾರಕನು ದನಿಗೂಡಿಸಿರುವುದು ಆಶ್ಚರ್ಯಕರವಾಗಿದೆ. ಅವನ ಕ್ರಾಂತಿಯ, ಪ್ರತಿಭಟನೆಯ, ಸ್ವಚ್ಛಂದ ಪ್ರವೃತ್ತಿಯ ಮಿತಿಯನ್ನು ಎತ್ತಿ ತೋರಿಸುತ್ತದೆ. (ಈ ವಚನಗಳನ್ನು ಸರ್ವಜ್ಞಕೃತವೆಂದೇ ಎಲ್.ಬಸವರಾಜು ಅವರು, ಇದರ ಸಂಗ್ರಹಕಾರರು ಒಪ್ಪಿದ್ದಾರೆ).

ಇನ್ನು ವೇಶ್ಯಾಪದ್ಧತಿಯ ವಚನಗಳನ್ನು ನೋಡಬಹುದು. ಸಮಾಜಶಾಸ್ತ್ರಜ್ಞರು ವೇಶ್ಯಾವೃತ್ತಿಯನ್ನು ಸಮಾಜದ ಪ್ರಾಚೀನ ಪದ್ಧತಿ ('The Oldest Institution') ಎನ್ನುತ್ತಾರೆ. ನಾಗರಿಕ ಸಮಾಜ ಕೆಲವು ರೀತಿ ರಿವಾಜುಗಳನ್ನು ಅಳವಡಿಸಿಕೊಂಡು ಕುಟುಂಬ, ದಾಂಪತ್ಯ ಎಂದು ಗಟ್ಟಿಗೊಳ್ಳುತ್ತಿದ್ದಾಗಲೇ ಈ ವೇಶ್ಯಾವೃತ್ತಿ ಸಮಾನಾಂತರವಾಗಿ ತಲೆ ಎತ್ತಿ ಬಾಳುತ್ತಾ ಬಂದಿದೆ. ನಮ್ಮ ಚಂಪೂಕವಿಗಳ ಅಷ್ಟಾದಶವರ್ಣನೆಯ ಪಟ್ಟಿಯಲ್ಲಿ ವೇಶ್ಯಾವಾಟಿಕೆಯ ವರ್ಣನೆಯು ಒಂದಾಗಿದೆ. ಸಮಾಜ ತಣ್ಣನೆ ಅವ್ಯವಸ್ಥೆಯನ್ನು ಅಂಗೀಕರಿಸಿಬಿಟ್ಟಿದೆ.

ಸರ್ವಜ್ಞ ವಚನಗಳ ಹೆಸರಿನಲ್ಲಿ ಸಂಗ್ರಹಗೊಂಡು ನೂರಕ್ಕೂ ಮಿಕ್ಕ ವಚನಗಳು ಈ 'ವೇಶ್ಯಾಪದ್ಧತಿ'ಗೆ ಸೇರಿದವುಗಳಾಗಿವೆ. ಅಧಿಕೃತವಾಗಿ ಸರ್ವಜ್ಞಕೃತವೆಂದು ಎಲ್.ಬಸವರಾಜು ಅಂಗೀಕರಿಸುವ ಸಂಗ್ರಹದಲ್ಲಿ ಕನಿಷ್ಠ ೫೦–೬೦ ವಚನಗಳು ಈ ಕುಲುಮೆಯಲ್ಲಿ ಸೇರಿವೆ (ಶೀರ್ಷಿಕೆ).

ವೇಶ್ಯಾವೃತ್ತಿಯನ್ನು ಸಮಾಜದಿಂದ ಇಲ್ಲಗೈವುದು ಹೇಗೆ? ಅದರ ಮೂಲ ಎಲ್ಲಿದೆ? (ವೇಶ್ಯೆಯನ್ನು ಆಧರಿಸುವವರು ಇರುವವರೆಗೆ, ವೇಶ್ಯಾವೃತ್ತಿ ಇರುತ್ತದೆ ಅಲ್ಲವೆ?) ಎಂದು ಗಂಭೀರ ಚಿಂತನೆಯನ್ನು ಸರ್ವಜ್ಞ ಮಾಡಿದಂತೆ ತೋರುವುದಿಲ್ಲ; ವೇಶ್ಯಾವೃತ್ತಿ ಸಮಾಜದ ಒಂದು ಅವಿನಾಭಾವ ಎಂದು ಒಪ್ಪಿ ಅದನ್ನು ನಿರ್ಲಿಪ್ತತೆಯಿಂದ ವರ್ಣಿಸುತ್ತಾನೆ. ವೇಶ್ಯೆಯರ ಸ್ವಭಾವ, ಆಲೋಚನೆ, ನಡೆದುಕೊಳ್ಳಬೇಕಾದ ರೀತಿರಿವಾಜುಗಳು, ಇವುಗಳ ಬಗ್ಗೆ ಮಾತ್ರ ದಾಖಲಿಸುತ್ತಾನೆ.

ವಸಾಹತುಶಾಹಿ ಮತ್ತು ಪಾಳೆಯಗಾರ 'ಸಂಸ್ಕೃತಿ' ವೇಶ್ಯಾವೃತ್ತಿಯನ್ನು ಪೋಷಿಸಿ, ಬೆಂಬಲಿಸಿ ಕಾಪಾಡಿಕೊಂಡು ಬರುತ್ತದೆ ಎಂಬ ಅದರ ಬೇರನ್ನು ಹುಡುಕಿ ಅದಕ್ಕೆ ಮದ್ದು ಅರೆಯುವ ಕ್ರಾಂತಿಕಾರಕ ಧೋರಣೆ ಇಲ್ಲಿಲ್ಲ. ಈ ನೂರಾರು ವಚನಗಳನ್ನು "ಸಾಮಾಜಿಕ ಚಿತ್ರಣ" ಎಂದು ಸ್ವೀಕರಿಸಬೇಕೇ?

ಪುರುಷ ಪ್ರಧಾನ ಸಂಸ್ಕೃತಿ ತನ್ನ ಸ್ವಾರ್ಥಕ್ಕಾಗಿ, ತನ್ನ ಕುಟುಂಬದ ಸ್ವಾರ್ಥಕ್ಕಾಗಿ ಈ ಕೊಳಚೆ ಕಾಲುವೆಯ ಹೊರದಾರಿಯನ್ನು ನಿರ್ಮಿಸಿ ಕಾದಾಡಿಕೊಂಡು ಬಂದ ದುರಂತವನ್ನು ಕುರಿತು ಏಕೆ ಸರ್ವಜ್ಞ ಮಾತನಾಡುವುದಿಲ್ಲ? ಒಂದು ಆದರೂ ಹೆಣ್ಣನ್ನು ಕಲ್ಪಿಸಿ, ಪೂಜಿಸುವ ಉದಾತ್ತತೆ, ಅದೇ ಹೆಣ್ಣಿನ ಈ ವಿಕಾರಮುಖವನ್ನು ಹೇಗೆ ಸಹಿಸಿಕೊಳ್ಳುತ್ತದೆ?

ಒಡವೆಕೊಟ್ಟ ಮಿಂಡ ಬವಬಲ್ಲಿದನೆನದೆ
ತೊಡರಿ ಸಮರಸದಿ ಸುಖವೀವ ಸೂಳೆಯ
ತೊಡಚಲು ಪಾಪ ಸರ್ವಜ್ಞ

ಏನು ಹೇಳುತ್ತಿದ್ದಾನೆ ಸರ್ವಜ್ಞ? ಸೂಳೆ ವೃತ್ತಿಯಲ್ಲಿ ಪ್ರಾಮಾಣಿಕರು, ಬಡವ ಬಲ್ಲಿದರೆಂಬ ಭೇದಭಾವವಿಲ್ಲ. ಅಂಥವಳನ್ನು (ತೊಡಚುಂ ಮುಟ್ಟು/ಕೆಣಕು?) ಕೆಣಕಬಾರದು, ಪಾಪ ಕರಗುತ್ತದೆ ಎಂದು ಅರ್ಥವೇ?

ಮುಂದಿನ ವಚನಗಳಲ್ಲಿ 'ಸೂಳೆಗೆ ರೊಕ್ಕದಾಸೆ', 'ಅವಳ ಕಣ್ಣೀರು ಕೃತಕ', 'ಸೂಳೆಗೆ ಹಲ್ಲುದ್ದವೇಕೆ?', 'ಸೂಳೆಗೆ ಕರುಣವಿಲ್ಲ', 'ಸೂಳೆಗೆ ಕುಲಶೀಲವಿಲ್ಲ', 'ಸೂಳೆಗೆ ನೀತಿಯಿಲ್ಲ'

ಆಲಕ್ಕೆ ಹೂವಿಲ್ಲ, ಸಾಲಕ್ಕೆ ಕೊನೆಯಿಲ್ಲ
ಜಾಲಿಯ ಗಿಡಕ್ಕೆ ಗಂಟಿಲ್ಲ, ದೇವನು
ಸೂಳೆಗಿಲ್ಲೆಂದ ಸರ್ವಜ್ಞ

ಸೂಳೆಯನ್ನು ಯಾವ ದೇವರೂ ಕಾಪಾಡುವುದಿಲ್ಲ ಅಥವಾ ಅವಳ ಪಾಲಿಗೆ ಯಾವ ದೇವರೂ ಇಲ್ಲ ಎಂದು ಅರ್ಥವೇ?

'ಸೂಳೆಗೆ ಪುರುಷನೇ ಇಲ್ಲ' (ಒಬ್ಬ ಗಂಡ ಇಲ್ಲ), 'ಸೂಳೆಗೆ ಕೀಳುಮೇಲಿಲ್ಲ' ಬಳ್ಳಿಯು, ಬೆಲೆವೆಣ್ಣು ಒಂದೇ ಸ್ವಭಾವದವು, ಒಂದು ಮರನ ತಬ್ಬಿಕೊಂಡು ಇನ್ನೊಂದಕ್ಕೆ ಹಾತೊರೆಯುವುದು. ಸೂಳೆಯನ್ನು ಹರಗೋಲಿ(ಹರಿಗೋಲು)ಗೆ ಹೋಲಿಸುತ್ತಾನೆ. ಹರಗೋಲನ್ನು ಒಬ್ಬ ಇಳಿದರೆ ಮತ್ತೊಬ್ಬ ಏರುತ್ತಾನೆ.

ಸೂಳೆ ಯಾರೊಬ್ಬರಿಗೂ ಮೀಸಲಲ್ಲ; ಅವಳ ವೃತ್ತಿಧರ್ಮವೇ ಅದು. ಅದನ್ನು ಪರಿಪರಿ ರೀತಿಯಲ್ಲಿ ಸರ್ವಜ್ಞ ಮೂದಲಿಸಿ ತೋರುತ್ತಾನೆ. ಸೂಳೆಯ ವೃತ್ತಿಗೆ ಯಾವ ಮೂಲಾರ್ಥವಿಲ್ಲ; ದೇಹವೇ ಸರ್ವಸ್ವ.

'ಸೂಳೆಯ ಸಂಸಾರ ಕೆಡುಗು' ಎಂಬ ಪರಮಸತ್ಯವನ್ನು ಸರ್ವಜ್ಞ ಸಾರಿ, ಸೂಳೆಯ ಸಹವಾಸ ಬೇಡ ಎಂದು ಹತ್ತಾರು ವಚನಗಳಲ್ಲಿ ನೀತಿಬೋಧೆ ಮಾಡಿದ್ದಾನೆ.

ಪ್ರಾಣ, ಧನ ಹಾನಿ, ಸೂಳೆಯ ಕಾಟ ಬೇಡ
(ಅವಳ ಸಹವಾಸ) "ತುಪ್ಪವುಂಡೆಗೆದ ಎಲೆನೆಕ್ಕಿ ನಾಯಿ ಬಾಯಿ ಚಪ್ಪರಿಸಿದಂತೆ'
'ಸೂಳೆ ಹುಸಿವವರನ್ನು, ಹಣವುಳ್ಳವರನ್ನು' ಅರಿದಿಹಳು.
ಒಂದೆಲಗ ಮೆಲಹೊಲ್ಲ ನಿಂದಕರ ನೆಲಹೊಲ್ಲ
ತಂದೆಯನು ಜರಿವ ಮಗ ಹೊಲ್ಲ ಸೂಳೆಯ
ದಂಡುಗವೇ ಹೊಲ್ಲ ಸರ್ವಜ್ಞ

ಸೂಳೆಯನ್ನು ಸಾರುವವನ ನೆಚ್ಚುವವನು, "ಹುಚ್ಚ, ಹೆಡ್ಡ, ಎಗ್ಗ" ಎಂದು ಎಚ್ಚರಿಸಿ ಬಯ್ದಿದ್ದಾನೆ. ಸೂಳೆಯನ್ನು ವಂಚಿಸಬಹುದು ಎಂದು ಉಪಾಯ ಹೇಳಿಕೊಡುತ್ತಾನೆ.

ಮಾತುಮಾತನೇ ಆಡಿ ಮಾತಿನಲಿ ಮರೆ ಮಾಡಿ
ಮಾತಿನಲಿ ಹಣವ ಮರಸಿ ತಾನೆದ್ದು
ಹೋದಾತನೇ ಜಾಣ ಸರ್ವಜ್ಞ

ಮಾತನೆ ಉಣಕೊಟ್ಟು ಮಾತನೆ ಉಡ ಕೊಟ್ಟು
ಮಾತಿನ ಮುತ್ತ ಕೊಡಕೊಟ್ಟು ಬೆಳಗೆ ಹೋ
ದಾತನೇ ಜಾಣ ಸರ್ವಜ್ಞ

ವಿಟರ ಪರವಾಗಿ ನಿಂತು, ಸೂಳೆಗೆ ವಂಚಿಸುವುದನ್ನು ಹೇಳಿಕೊಟ್ಟಿದ್ದಾನೆ ಈ ಸರ್ವಜ್ಞ. ಇವನಿಗೇಕೆ ಈ ವಿಟಪರ ಕಾಳಜಿ?

ಸೂಳೆಯ ನೆಲೆಯಿಂದ ನೋಡಿ ಅವಳ ದುರಂತ ಬದುಕು, ಶೋಷಣೆಯ ಬದುಕು, ಅವಳ ಮನಸು, ಕನಸು, ಅವಳ ಭಾವಗಳನ್ನು ಸಹಾನುಭೂತಿಯಿಂದ ಕಾಣುವ ಔದಾರ್ಯ, ಮಾನವೀಯತೆ ಸರ್ವಜ್ಞನಲ್ಲಿ ಕಾಣುವುದಿಲ್ಲ. ಸೂಳೆಗಾರಿಕೆ ಎಂಬ ಈ ವ್ಯವಸ್ಥೆ ಹಿಂದಿನ ಶಕ್ತಿಗಳನ್ನು ಅದನ್ನು ಕಾಪಾಡಿಕೊಂಡು ಬರುತ್ತಿರುವ ಹಿತಾಸಕ್ತಿಗಳನ್ನು ಸರ್ವಜ್ಞ ಬೆದಕುವುದಿಲ್ಲ, ಅಷ್ಟರ ಮಟ್ಟಿಗೆ ಇವರ ಆಲೋಚನೆಗಳು ಪ್ರತಿಗಾಮಿ, ಜಡ, ಸ್ಥಿತಿಬದ್ಧ.

ಕಾಮದ (sex) ಆದಮ್ಯ ಶಕ್ತಿಯನ್ನು ಸರ್ವಜ್ಞ ಕಂಡು ಬೆಚ್ಚಿದ್ದಾನೆ. ಕುಟುಂಬ ವ್ಯವಸ್ಥೆಯ ಮೂಲದಲ್ಲಿ 'ಕಾಮ' ಇದೆ; ಸೂಳೆಗಾರಿಕೆಯ ಜಾಲದ ಹಿಂದೆ ಈ ಕಾಮದ ಕೈವಾಡವಿದೆ. ಇದು ಎಷ್ಟು ಬಲಿಷ್ಠ, ಅನಿವಾರ್ಯ, ಸರ್ವವ್ಯಾಪಿ, ಸರ್ವಾಂತರ್ಗಾಮಿ ಎಂಬ ಬಗ್ಗೆ ಸರ್ವಜ್ಞನ ವಿಚಾರಗಳು ಮನನೀಯವಾಗಿದೆ, ವಿಚಾರಾರ್ಹವಾಗಿದೆ, ಸತ್ಯಸ್ಯಸತ್ಯವಾಗಿದೆ. ಕಾಮ (sex) ಎನ್ನುವ ಪರಿಕಲ್ಪನೆಗೆ ಸರ್ವಜ್ಞ ಬಳಸುವ ಪರಿಭಾಷೆಯು 'ಯೋನಿ' ಅಥವಾ ಅದಕ್ಕೆ ಪರ್ಯಾಯವಾದ ಸಂಕೇತಗಳು. ಅವನ ಆಳವಾದ, ಧ್ಯಾನಶೀಲವಾದ, ಸತ್ಯನಿಷ್ಠವಾದ ನೇರವಾದ ಮಾತುಗಳು ಅಪ್ರಿಯವಾದರೂ, ಮುಜುಗರವನ್ನುಂಟು ಮಾಡಿದರೂ, ಎಲ್ಲರ ಅಂತರಂಗವನ್ನು ಮುಟ್ಟುತ್ತದೆ, ತಟ್ಟುತ್ತದೆ, ಪಿಸುಗುಟ್ಟುತ್ತದೆ, ವ್ಯಾಪಿಸುತ್ತದೆ, ಭೂಮವಾಗಿ, ಆದ್ಯಂತವಾಗಿ ಕಾಮ(sex)ವನ್ನು ಕುರಿತಾದ ಸರ್ವಜ್ಞನ ಚಿಂತನಗಳು, ಸತ್ಯದ ಅನಾವರಣಗಳು ಅದ್ಭುತವಾಗಿವೆ. ಅದು ಅವನ ವಿಶಿಷ್ಟ ಕಾಣ್ಕೆ, ದರ್ಶನವೆಂದರೂ ಸರಿಯೇ?

**ಉಚ್ಚೆಯ ಬಚ್ಚಲು ಚಿಕ್ಕದೆಂದೆನಬೇಡ**
**ಅಚ್ಯುತ ಬಿದ್ದ ಅಜ ಬಿದ್ದ ದೇವೇಂದ್ರ**
**ಎಚ್ಚೆತ್ತು ಬಿದ್ದ ಸರ್ವಜ್ಞ**

ಇಲ್ಲಿ ಉಚ್ಚೆಯ ಬಚ್ಚಲು ('ತಗ್ಗಿನ ಕುಣಿ' ಎಂಬ ಪಾಠಾಂತರವನ್ನು ನಾನು ಓದಿದ್ದೇನೆ). ಹೆಣ್ಣಿನ ಮರ್ಮಾಂಗ, ಅರ್ಥಾತ್ 'ಯೋನಿ' ಯುಜ್ 'ಕೂಡುವುದು' ಎಂಬ ಅರ್ಥದ ಧಾತು ಮೂಲವುಳ್ಳ ಶಬ್ದ, ಇದನ್ನು ಕಾಮ (sex) ಎಂಬ ಪರಿಭಾಷೆಯಾಗಿ ಸರ್ವಜ್ಞ ಬಳಸಿದ್ದಾನೆ.

ಸರ್ವಜ್ಞನ ಅತ್ಯುತ್ತಮವಾದ ಹತ್ತಿಪ್ಪತ್ತು ವಚನಗಳನ್ನು ಆರಿಸುವುದಾದರೆ, ಈ ಮೇಲಿನ ವಚನಕ್ಕೆ ಅಲ್ಲಿ ಸ್ಥಾನವುಂಟು. ಭಾಷೆ ತುಂಬಾ ಒರಟಾಗಿ, ಅನಾಗರೀಕವಾಗಿದ್ದರೂ ನೇರವಾಗಿ, ಸ್ಪಷ್ಟವಾಗಿ ಯಾವ ಬೂಟಾಟಿಕೆಯ ನೆವವೂ ಇಲ್ಲದೆ ಒಂದು ನಿತ್ಯದ ಸತ್ಯವನ್ನು ಜಗ್ಗನೆ ಬೆಳಗುತ್ತದೆ.

ಅಚ್ಯುತ, ಅಜ, ದೇವೇಂದ್ರರು ಒಂದೊಂದು ಲೋಕದ, ಒಂದೊಂದು ವಿಶಾಲಪ್ರಪಂಚದ ಪ್ರತಿನಿಧಿಗಳು, ಇದು ಮೂಲಾರ್ಥದಲ್ಲಿ Libido ಎಂದು ಫ್ರಾಯ್ಡ್ ನಿರ್ದೇಶಿಸಿರುವ ಸಮಸ್ತ ಚಟುವಟಿಕೆಗಳ, ಆಸಕ್ತಿಗಳ ಮೂಲಶಕ್ತಿಯಾಗಿದೆ.

ಪಕ್ಷಪಾತದಿಂದ ಹರನಿಗೆ ವಿನಾಯಿತಿ ಕೊಟ್ಟನಲ್ಲ ಎಂದು ನಮ್ಮಲ್ಲಿ ಕೆಲವರು ಅಂದುಕೊಂಡದ್ದು ಉಂಟು. ಆದರೆ ಮೇಲಿನ ವಚನದೊಡನೆ ಈ ವಚನವನ್ನು ಪರಿಶೀಲಿಸಬೇಕು, ಕುರಿತು ಧೇನಿಸಬೇಕು.

ಸಂದಿಯ ಗಾಯ ಜಗವಂದ್ಯವಾಗೆಸೆಯಿತು
ನಂದಿವಾಹನವು ಅಜಹರಿಗಳಾಂತದನು
ಹೊಂದಿಕೊಂಡಿಹರು ಸರ್ವಜ್ಞ
ಯೋನಿ ಜಗತ್‌ವಂದ್ಯ; ಪೂಜ್ಯ ಇಲ್ಲಿ ಹರನಿಗೂ ವಿನಾಯಿತಿ ಇಲ್ಲ.

ನಂದಿವಾಹನ, ಅಜ, ಹರಿ, ತ್ರಿಮೂರ್ತಿಗಳು ಅದಕ್ಕೆ ಹೊಂದಿಕೊಂಡಿದ್ದಾರೆ. ಎಂಥ ಅದ್ಭುತ ದರ್ಶನ.

ಕಂತೆಕಂತೆ ವೈದಿಕ ಸಾಹಿತ್ಯದಲ್ಲಿ, ಅವೈದಿಕ ಸಾಹಿತ್ಯದಲ್ಲಿ ಭೋಳೆ ಮಾತುಗಳನ್ನು ಕೇಳಿ ಬೆಂಡಾದ ನಮ್ಮ ಅರಿವಿಗೆ ನೂತನ, ನಿಷ್ಠುರ ಸತ್ಯ ತೆರೆದುಕೊಳ್ಳುತ್ತದೆ. ಇದಕ್ಕೆ ಪೂರಕವಾಗಿ, ಸ್ಪಷ್ಟನೆಗಾಗಿ ಈ ಕೆಳಗಿನ ವಚನಗಳನ್ನು ಪರಿಶೀಲಿಸಬೇಕು.

ರುದ್ರನು ಕೂರ್ತು ತಾನರ್ಧನಾರಿಯು ಆದ
ಇದ್ದವರೊಳಾರ ಸತಿಯರ ಹೃದಯವ
ಗೆದ್ದವರ ಕಾಣೆ ಸರ್ವಜ್ಞ

ಹರಿಯ ಉರವನು ಮೆಟ್ಟಿ ಹರನನೆತ್ತಿಯನೇಱಿ
ಸರಸಿಜೋದಯನ ಮೋಱೆಗೆಡಿಸಿ–ಮೀಱಿದಳು
ಹಿರಿಯರಿನ್ನಾರು ಸರ್ವಜ್ಞ

ಹರಿಹರಬ್ರಹ್ಮಾದಿ ತ್ರಿಮೂರ್ತಿಗಳ ಜಾರೆಯರು ಕ್ರಮವಾಗಿ ಲಕ್ಷ್ಮಿ, ಗೌರಿ, ಸರಸ್ವತಿ. ಬ್ರಹ್ಮ ವಾವೆ ತಪ್ಪಿ ಮಗಳನ್ನೆ ಮದುವೆಯಾದ.

ಈ ಎಲ್ಲಾ ಅನಾಹುತಗಳಿಗೆ ವಿಪ್ಲವಗಳಿಗೆ, ತೊತ್ತಳದುಳಿತಕ್ಕೆ, ಕಾರಣನಾದವನು ಕಾಮ (Sex).

ಆದ್ದರಿಂದ

"ಅಂದು ಕಾಮನ ಹರನು ಕೊಂದನೆಂಬುದು ಹುಸಿ
ಇಂದು ವದನೆಯರ ಕಡೆಗಣ್ಣ–ನೋಟದೊಳು
ನಿಂದನು ಸ್ಮರನು ಸರ್ವಜ್ಞ"

ಆಲಂಕಾರಿಕವಾಗಿ ಬಂದ ಈ ಹೇಳಿಕೆಯಲ್ಲಿ ಧ್ವನಿತವಾಗುವ ಸಾರಾಂಶವಾದರೂ ಏನು? "ಕಾಮ" ಸರ್ವ ವ್ಯಾಪಿ, ಸರ್ವಶಕ್ತ, ಅಚ್ಯುತ, ಅಮೇಯ, ಅನೂಹ್ಯ ಎಂದಲ್ಲವೆ?

(ಆಂಡಯ್ಯನು 'ಕಬ್ಬಿಗರ ಕಾವ'ದಲ್ಲಿ ಹರನನ್ನು 'ಅರೆವೆಣ್ಣಾದವನು' ಎಂದು ಮೂದಲಿಸಿರುವುದನ್ನು ಇಲ್ಲಿ ಸ್ಮರಿಸಕೊಳ್ಳಬಹುದು).

ಸರ್ವಜ್ಞನು ಇನ್ನು ಒಂದು ಹೆಜ್ಜೆ ಮುಂದಿರಿಸಿ

"ಯೋನಿಜರು ಯೋನಿಯನು ಹೀನಮಾಡುವಿರೇಕೆ
ಆನಂದ ಜನನಕದು ಮುಖ್ಯ – ಶುಚಿಮಾಡಿ
ತಾನೊಲಿಯಬೇಕು ಸರ್ವಜ್ಞ"

ಈ ವಚನಕ್ಕೆ ಮತ್ತೊಂದು ಪಾಠಾಂತರವಿದೆ. ಅದು ಅಷ್ಟೆ ಚೆನ್ನಾಗಿದೆ.

"ಯೋನಿಜರು ಯೋನಿಯನು ಹೀನ ಮಾಡುವಿರೇಕೆ
ಆನಂದಮಯ ಶಿವಯೋಗಿ ಅದಬಿಟ್ಟು
ತಾನೆಲ್ಲಿ ಬಂದ ಸರ್ವಜ್ಞ"

ಸ್ತ್ರೀ ಅಥವಾ ಹೆಣ್ಣಿನ ವಿವಿಧ ಪಾತ್ರಗಳನ್ನು – ಪಾತ್ರ ವಿಕಾರಗಳನ್ನು (ಸೂಳೆ) ಕಂಡು ಕಾಣಿಸಿದ್ದಾನೆ ಸರ್ವಜ್ಞ. "ಸ್ತ್ರೀರತ್ನ ಒಡವೆಯೊಳಧಿಕ" ಎಂಬುದು ಅವನ ಕೊನೆಯ ಮಾತು.

## ೩.೪ ಸರ್ವಜ್ಞನ ವಚನಗಳಲ್ಲಿ ಗುರು ಶಿಷ್ಯ ಪರಂಪರೆ

ಗುರುವನ್ನು ಕುರಿತಾದ ಸರ್ವಜ್ಞನ ಚಿಂತನೆಗಳು ಮನನ ಯೋಗ್ಯವಾಗಿವೆ. ನಮ್ಮ ಸಂಸ್ಕೃತಿಯಲ್ಲಿ ಗುರುವಿಗೆ ಅತ್ಯಂತ ಶ್ರೇಷ್ಠ ಸ್ಥಾನಕೊಡಲಾಗಿದೆ. ಈ ಪ್ರಸಿದ್ಧ ಗುರುಸ್ತುತಿಯನ್ನು ಸ್ಮರಿಸಿಕೊಳ್ಳೋಣ.

**ಗುರುಸ್ತುತಿ:**

"ನಗುರೋರಧಿಕಂತತ್ತ್ವಂ" ಗುರುವಿಗಿಂತಲು ಅಧಿಕವಾದ ತತ್ವವು ಯಾವುದು ಇಲ್ಲ, ಎಂಬುದು ಪ್ರಸಿದ್ಧ ವಾಕ್ಯ. ಸುಪ್ರಸಿದ್ಧ ಗುರುಸ್ತಿತಿಗಳು ಹೀಗಿವೆ.

ಗುರುರ್ಬ್ರಹ್ಮಾ ಗುರುರ್ವಿಷ್ಣುರ್ಗುರುರ್ದೇವೂ ಮಹೇಶ್ವರಃ
ಗುರುಧೇವ ಪರಂಬ್ರಹ್ಮ ತಸ್ಮೈ ಶ್ರೀ ಗುರವೇ ನಮಃ

ಬ್ರಹ್ಮ ವಿಷ್ಣು ಮಹೇಶ್ವರರಾದ ತ್ರಿಮೂರ್ತಿಗಳು ಗುರುವೇ ಆಗಿದ್ದಾರೆ. ಗುರುವೇ ಸಾಕ್ಷಾತ್ ಪರಬ್ರಹ್ಮ, ಅಂತಹ ಶ್ರೀಗುರುವಿಗೆ ನಮನ.

ಅಜ್ಞಾನ ತಿಮಿರಾಂಧಸ್ಯ ಜ್ಞಾನಾಂಜನ ಶಲಾಕಯಾ
ಚಕ್ಷುರುನ್ಮೀಲಿತಂ ಯೇನ ತಸ್ಮೈ ಶ್ರೀಗುರುವೇ ನಮಃ

ಆಜ್ಞಾನವೆಂಬ ಕತ್ತಲೆಯಿಂದ ಕುರುಡನಾಗಿರುವವನ ಕಣ್ಣನ್ನು ಅರಿವು ಎಂಬ ಅಂಜನ ಸಲಾಕೆಯಿಂದ ತೆರೆಸಿದ ಶ್ರೀಗುರುವಿಗೆ ತಲೆಬಾಗುತ್ತೇನೆ.

"ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ" – ಎಂಬುದು ಪುರಂದರದಾಸರ ಪ್ರಸಿದ್ಧ ಹೇಳಿಕೆ. ಈ ಹಿನ್ನಲೆಯಲ್ಲಿ ಸರ್ವಜ್ಞನು ಗುರುವಿನ ಬಗ್ಗೆ ವ್ಯಕ್ತಪಡಿಸಿರುವ ಅಭಿಪ್ರಾಯಗಳನ್ನು, ಸ್ತುತಿಯನ್ನು ನೋಡೋಣ:

ಸರ್ವಜ್ಞನ ಪ್ರಸಿದ್ಧವಾದ ವಚನವಿದು.

ಸುರುತರು ಮರನಲ್ಲ, ಸುರಭಿಯೊಂದಾವಲ್ಲ
ಪರುಷ ಪಾಷಣದೊಳಗಲ್ಲ ಗುರುವೃತಾ
ನರರೊಳಗಲ್ಲ ಸರ್ವಜ್ಞ.

ದೇವಲೋಕದ ಕಲ್ಪವೃಕ್ಷವೂ ಒಂದು ಮರವೇ, ಆದರೆ ಬರಿ ಮರವಲ್ಲ, ಕಾಮಧೇನು ಹಸುವೇ, ಆದರೆ ಅದು ಸಾಮಾನ್ಯ ಹಸುವಲ್ಲ, ಮುಟ್ಟಿದ್ದನ್ನು ಚಿನ್ನ ಮಾಡುವ ಸ್ಪರ್ಶ ಶಿಲೆ ಕಲ್ಲೇ, ಆದರೆ ಬರಿ ಕಲ್ಲಲ್ಲ. ಅಂತೆಯೇ ಗುರುವಾದವನು ನರರೂಪಿಯಾದರೂ ಬರಿ ನರನಲ್ಲ.

ಪುರಾಣ ಪ್ರಸಿದ್ಧವಾದ, ಪರಂಪರೆಯ ಭಾವಕೋಶದಲ್ಲಿ ನೆಲೆ ನಿಂತಿರುವ ಈ ಎಲ್ಲ ವಸ್ತು ವಿಶೇಷಗಳು ಇಷ್ಟಾರ್ಥ ಪೂರೈಸುವ ಸಾಧನಗಳು. "ಅಂತೆಯೇ ಗುರು" ಸಮಸ್ತ ಇಷ್ಟಾರ್ಥವನ್ನು ಕೊಡುವ ವರದ, ದಾನಿ,

ಪ್ರಯತ್ನಮುಖಿ, ಮುಕ್ತ ಹಸ್ತ. ನಮ್ಮ ಭಾವಕೋಶದಲ್ಲಿ, ನಂಬಿಕೆಯಲ್ಲಿ ಅಸ್ತಿತ್ವ ಪಡೆದುಕೊಂಡಿರುವ ಪೂರ್ವೋಕ್ತ ವಸ್ತುಗಳನ್ನು ನಾವು ಪ್ರತ್ಯಕ್ಷ ಕಂಡಿಲ್ಲ. ಅವುಗಳ ಪ್ರತಿರೂಪವಾದ 'ಗುರು' ನಮಗೆ ಪ್ರತ್ಯಕ್ಷ ದಕ್ಕಿದ್ದಾನೆ. ಆ ನಾಲ್ಕು ದಾನ ಚಿಂತಾಮಣಿಗಳು ಏಕೀಭವಿಸಿದಂತಿರುವ ಸಾವಯವ, ಸನ್ನಿಕಟ ಪ್ರತಿನಿಧಿ.

ಬ್ರಹ್ಮವೆಂಬುದು ತಾನು ಒಮ್ಮಾರು ನೀಳವೇ
ಒಮ್ಮೆ ಸದ್ಗುರು ವಿನುಪದೇಶ (ಪಾಲಿಸಲು)
ಗುಮ್ಮನೆ ಮುಕ್ತಿ ಸರ್ವಜ್ಞ.

ಬ್ರಹ್ಮಜ್ಞಾನವೆಂಬುದು ಎಟುಕದ ವಸ್ತುವೆ? ಬಲುದೂರವಿದೆಯೆ? ಸದ್ಗುರುವಿನ ಅನುಗ್ರಹ ದೊರೆತರೆ ನೆಟ್ಟನೆ ಮುಕ್ತಿ ಪ್ರಾಪ್ತಿ. ಪುರಾಣೇತಿಹಾಸಗಳಲ್ಲಿ ಗುರುಕೃಪಾತೀರ್ಥದಲ್ಲಿ ಮಿಂದು ಪವಿತ್ರಾತ್ಮರಾದ ಅನೇಕರ ದೃಷ್ಟಾಂತಗಳಿವೆ. ಗುರುಗೋವಿಂದನ ಪಾದ ಕಂಡ ಶಿಶುನಾಳ ಶರೀಫ ಸಾಹೇಬ, ಶ್ರೀರಾಮಕೃಷ್ಣ ಪರಮಹಂಸರ ಸ್ಪರ್ಶದಿಂದ ಅನುಗ್ರಹಿತನಾದ ಸ್ವಾಮಿ ವಿವೇಕಾನಂದ.

ದರುಶನವಾಱಱಂ ಪುರುಷರುಮೂವರಿಂ
ಪರತತ್ತ್ವದಿರುವು ಬೇಡೆಂದು ತೋರಿದ
ಗುರುತಾನೆ ದೈವ ಸರ್ವಜ್ಞ

ಷಡ್ದರ್ಶನಗಳನ್ನು ಅರಿತಿರಬಹುದು, ತ್ರಿಮೂರ್ತಿಗಳನ್ನು ಸಾಧಿಸಿರಬಹುದು, ಆದರೆ ಪರತತ್ತ್ವದ ಇರುವು, (ಪರಬ್ರಹ್ಮದ ಸ್ವರೂಪ) ಇದರಾಚೆ ಎಂದು ತೋರುವವನು ಗುರುವೇ!

ಅವನೇ ಶಿಷ್ಯನ ಪಾಲಿನ ದೈವ.

ಪರಮನೈವೊಗ ಉಳಿದು ನೆರವಿಯನೊಲ್ಲದೆ
ನರರೂಪ ಧರಿಸಿ ಗುರುವಾಗಿ ಬೋಧಿತಗೆ
ಸರಿಯಾರ ಕಾಣೆ ಸರ್ವಜ್ಞ.

ಸಾಕ್ಷಾತ್ ಪರಶಿವನೇ ತನ್ನ ಐದು ಮುಖವನ್ನು ಬಿಟ್ಟು, ಜನ ಸಂದಣಿಯನ್ನು ಬಿಟ್ಟು, ನರರೂಪಿಯಾಗಿ ಬಂದು ಗುರುವಾಗಿ ಏಕಾಂತದಲ್ಲಿ ಬೋಧಿಸುತ್ತಾನೆ. ಅವನಿಗೆ ಸಮಾನರು ಯಾರೂ ಇಲ್ಲ, ಅವನು ಅದ್ವಿತೀಯ.

ಊರಿಂಗೆ ದಾರಿಯನಾರು ತೋರಿದರೇನು
ಸಾರಾಯಮಪ್ಪ ಮತವನರುಹಿಸುವ ಗುರು
ವಾರಾದೊಡೇನು ಸರ್ವಜ್ಞ

ಗುರು ಎಂದರೆ ಯಾರು? ಅವನ ಮೂಲಚೂಲಗಳೇನು? ಅವನ ಇತಿಹಾಸವೇನು? ವಂಶವೇನು? ಅವನ ಬಣ್ಣ? ವರ್ಣ, ಲಿಂಗ? ಯಾವುದು, ಎಲ್ಲವೂ ಅಪ್ರಸ್ತುತ, ಅಗಣ್ಯ.

ಊರಿಗೆ ದಾರಿ ತೋರುವ ಆಗುಂತಕ, ದಾರಿಹೋಕ ಯಾರಾದರೇನು? ಜ್ಞಾನವೇ ಅವನ ಅರ್ಹತೆ. ಆದರಿಂದಲೇ ಅವನು ಮಾನ್ಯ, ಗಣ್ಯ, ಪೂಜ್ಯ, ಸ್ವೀಕಾರ ಯೋಗ್ಯ. ಗುರುವಿಗೆ ವಿಶೇಷವಾದ ಬಾಹ್ಯ ಚಿಹ್ನೆ ಇರಬೇಕಾಗಿಲ್ಲ. ಆದರೆ ಅರ್ಹತೆ ಇರಬೇಕು. ಗುರುವೇ 'ಮೂಢ'ನಾಗಿದ್ದರೆ?

ಹಿರಿತನವು ಹೇಡಿಂಗೆ ಗುರುತನವು ಮೂಢಂಗೆ
ದೊರೆತನವು ನಾಡ ನೀಚಂಗೆ ದೊರೆತಿಹರೆ
ಧರೆಯೆಲ್ಲ ಕೆಡುಗು ಸರ್ವಜ್ಞ.

ಗುರು ಜ್ಞಾನ ಪ್ರದೀಪ, ಜ್ಞಾನ ಸೂರ್ಯ, ಅವನೇನಾದರೂ ಮೂಢನಾಗಿದ್ದರೆ ಧರೆಯೆಲ್ಲ ಹಾಳು, ಪ್ರಳಯ, ಸರ್ವನಾಶ.

ಗುರುಪಾದ ಸೇವೆ ತಾ ದೊರೆಕೊಂಡಿತಾದೊಡೆ
ಹಿರಿದಪ್ಪ ಪಾಪ ಹರೆವುದು – ಕರ್ಪೂರದ
ಗಿರಿಯ ಸುಟ್ಟಂತೆ ಸರ್ವಜ್ಞ.

ಗುರುವಿನ ಪಾದಸೇವೆಯಿಂದ ಪಾಪದ ಮೊತ್ತವೇ ಇದ್ದರೂ ಮಾಯವಾಗುತ್ತದೆ. ಕರ್ಪೂರದ ಬೆಟ್ಟ ಉರಿ ತಾಕಿ ನಿಶ್ಶೇಷವಾಗುವಂತೆ. ಆದರೆ ಗುರುಕೃಪೆ ದೊರೆಯಬೇಕು! ದೊರೆಯುವುದಾದರೂ ಹೇಗೆ? ಅದು ಆಕಸ್ಮಿಕವೋ, ಪ್ರಯತ್ನದ ಫಲವೋ? ಸರ್ವಜ್ಞ ಶಿಷ್ಯನಿಗೆ ಸೂಚನೆ ಕೊಡುತ್ತಾನೆ. ಗುರುಕೃಪೆ ಪ್ರಾಪ್ತವಾಗಲು ಉಪಾಯ ಯಾವುದು ಎಂಬುದನ್ನು:

ವಿಷಯಕ್ಕೆ ಕುದಿಯದಿರು ಅಶನಕ್ಕೆ ಹದೆಯದಿರು
ಅಸಮಾಕ್ಷನಡಿಯನನಗಲದಿರು – ಗುರುಕರುಣ
ವಶವರ್ತಿಯಹುದು ಸರ್ವಜ್ಞ.

ಗುರುಕೃಪಾನುಗ್ರಹ ಪ್ರಾಪ್ತಿಗೆ ಒಂದು ಅರ್ಹತೆ ಬೇಕು. ಆ ಅರ್ಹತೆ ಅಥವಾ ಅಧಿಕಾರವನ್ನು ಗಳಿಸಬಹುದು ಪ್ರಯತ್ನ ಪೂರ್ವಕ.

ವಿಷಯಾಸಕ್ತಿಯಿಂದ ಮುಕ್ತನಾಗಿರಬೇಕು. ಹೊಟ್ಟೆಗೆ ದಾಸನಾಗದಿರು. ಅಸಮಾಕ್ಷನಪಾದವನ್ನು ನೆಮ್ಮು – ಇದು ಗುರು ಕೃಪೆಗೆ ದಾರಿ.

ಕೆಲವು ಸಂದರ್ಭಗಳಲ್ಲಿ ಹಿರಿಯರು ಗುರುವನ್ನು ತೋರಿಸಿಕೊಡಬಹುದು, ಗುರು ಮುಂದೆ ಮುಕ್ತಿ ಪಥವನ್ನು ತೋರಿಸುತ್ತಾನೆ.

ತಂದೆಗೆ ಗುರುವಿಗೆ ಒಂದು ಅಂತರವುಂಟು
ತಂದೆ ತೋರುವನು ಶ್ರೀಗುರುವ – ಗುರುರಾಯ
ಬಂಧನವ ಕಳೆವ ಸರ್ವಜ್ಞ.

ಕ್ರಮಾನುಗತವಾದ ಮಾರ್ಗವಿದೆ. ಗುರುವನ್ನು ಗುರುತಿಸುವುದು ಸುಲಭದ ಮಾತಲ್ಲ. ಆ ಗುರುವನ್ನು ತೋರುವ ಒಬ್ಬ "ಗುರು" (ತಂದೆ) ಬೇಕಾಗುತ್ತದೆ.

ತಂದೆಯಿಂದಾಗದ ಕೆಲಸ ಗುರುವಿನಿಂದಾಗುವುದು, ಇಲ್ಲಿ ತಂದೆ ನಿಮಿತ್ತ ಮಾತ್ರ ಶಿಷ್ಯನಿಗೆ ಒಂದು ಕನಿಷ್ಠ ಅರ್ಹತೆ ಇರಬೇಕಾಗುತ್ತದೆ. (ಕೆಲವು ವಿಶಿಷ್ಟ ಅ-ಪೂರ್ವ ಸಂದರ್ಭಗಳಲ್ಲಿ ಗುರುಕೃಪೆ ಮಳೆ ಮೋಡದಂತೆ ಅನಿಮಿತ್ತ ಧುಮ್ಮಿಕ್ಕಬಹುದು.)

ಶಿಷ್ಯನಲ್ಲಿ ಕನಿಷ್ಠ ಗುರುಭಕ್ತಿ ಇರಬೇಕು; ವಿಷಯಾಸಕ್ತಿ ದೂರನಾಗಿರಬೇಕು;

"ಜ್ಞಾನವಿಲ್ಲದಗೆ ಉಪದೇಶ ಹಾನಿ" ಎಂದಿದ್ದಾನೆ. ಶಿಷ್ಯನಿಗೆ ಜ್ಞಾನವಿಲ್ಲದಿದ್ದರೂ ಜ್ಞಾನ ತೃಷೆಯಾದರೂ ಇರಬೇಕು ಎಂದು ಅರ್ಥೈಸಬಹುದು.

ಶಿಷ್ಯ ಪರಿಪೂರ್ಣ ಜ್ಞಾನಿಯಾಗಿರುವುದಾದರೆ, ಅವನಿಗೆ ಗುರುವಿನ ಹಂಗಾದರೂ ಏಕೆ?

ಗುರು ಕೃಪೆ ಧಾರಾಳ, ಅಪ್ರತಿಮ, ಪರಿಣಾಮ ರಮ್ಯ – ಆದರೆ ಶಿಷ್ಯ ಹಸಿಯ ಸೌದೆಯಂತಿದ್ದರೆ, ಎಷ್ಟು ಹೊಸೆದರೂ ಕಿಚ್ಚು ಕಾಣುವುದೆ?

ಹೊಲಬನಱಿಯದ ಗುರುವು ತಿಳಿಯಲಱಿಯದ ಶಿಷ್ಯ
ನೆಲೆಯನಾರಯ್ಯುದುಪದೇಶ – ವಂಧಕನು (ಅಂಧಕನು)
ಕಳನಹೊಕ್ಕಂತೆ ಸರ್ವಜ್ಞ.

ಗುರುವುಗೆ ಸರಿಯಾದ ಲಕ್ಷ್ಯವಿಲ್ಲ; ಗ್ರಹಿಸಲಾರದ ಶಿಷ್ಯ, ಇವರ ಸಂಬಂಧ ಹೇಗೆ ಎಂದರೆ, ಕುರುಡನು ರಣರಂಗವನ್ನು ಹೊಕ್ಕಂತೆ, ಸಫಲವಾಗದು, ಸಾರ್ಥಕವಾಗದು, ಜಯವಾಗದು.

ಅಧ್ಯಯನ, ಅನಧ್ಯಯನ, ಮನನ, ಸ್ಮರಣ, ಧ್ಯಾನ – ಈ ಉಪಾಯಗಳು ಅತ್ತ ಇರಲಿ, ಶಿಷ್ಯನಾದವನು ಕೆಲವು ಪ್ರಾಥಮಿಕ ಲೌಕಿಕ ಶಿಷ್ಟಾಚಾರಗಳನ್ನು ಅಗತ್ಯವಾಗಿ ಪಾಲಿಸಬೇಕು.

ಒಂದೂರ ಗುರುವಿರ್ದು ವಂದನೆಯಮಾಡದೆ
ಸಂದಿಸಿ ಕೂಳ ತಿನತಿರ್ಪವನ ಇರವು
ಹಂದಿಯ ಇರವು ಸರ್ವಜ್ಞ.

ತಾನಿರುವ ಊರಿನಲ್ಲಿ ಗುರುವಿನ ವಾಸ್ತವ್ಯ ಇದ್ದಾಗಲೂ ಶಿಷ್ಯ ಗುರುವಂದನೆ ಮಾಡದೆ, ಗುರುವಿನೊಡನೆ ಸಹಭೋಜನವನ್ನು ಪರಿಹರಿಸಿ, ತಾನು ಮಾತ್ರ ಅನ್ನ ಮುಕ್ಕುವವನು ಹಂದಿಯಂತೆ, ತಿರ್ಯಕ್ ಜಂತುವಿನಂತೆ, ಮೃಗದಂತೆ.(ಅವುಗಳಿಗೆ ಆಹಾರವನ್ನು ಹುಡುಕುವುದೇ ಬದುಕು). ಶಿಷ್ಯನ ನಡವಳಿಕೆ ಹೇಗಿರಬೇಕು? ಗುರುಭಕ್ತಿ, ಗುರುಸೇವೆಯ ವಿವರಗಳನ್ನು ಸಹ ಸರ್ವಜ್ಞ ನಿರೂಪಿಸಿದ್ದಾನೆ. ಶಿಷ್ಯ ಗುರುಪಾದಸೇವೆಯನ್ನು ವ್ರತವೆಂಬಂತೆ

ಆಚರಿಸಬೇಕು. ಆದ್ದರಿಂದ ಶಿಷ್ಯ ವಿನಮ್ರರಾಗಿರಬೇಕು, ಸೇವಾಪರನಾಗಿರಬೇಕು, ವಿಧೇಯನಾಗಿರಬೇಕು, ಗುರುಕಿಂಕರನಾಗಿರಬೇಕು.

'ಎತ್ತಾಗಿ ತೊತ್ತಾಗಿ ಹಿತ್ತಿಲದ ಗಿಡವಾಗಿ, ಮತ್ತೆ ಪಾದದ ಕೆರವಾಗಿ ಗುರುವಿನ ಹತ್ತಿರಿರು' – ಎಂಬುದು ಸರ್ವಜ್ಞನು ಶಿಷ್ಯನಿಗೆ ಕೊಟ್ಟ ಸಂದೇಶ, ಬುದ್ಧಿಮಾತು.

ಶಿಷ್ಯನ ಬಾಹ್ಯ ವೇಷಭೂಷಣಗಳು, ಲಾಂಛನಗಳು ನಿಮಿತ್ತಮಾತ್ರ, ಅವುಗಳಿಂದ ಏನೂ ಫಲವಿಲ್ಲ, ಸಂಸಾರ ತ್ಯಾಗ ಮಾಡಿದರೂ ಫಲವಿಲ್ಲ.

'ಗುರುಮುಖವ ಕಂಡಲ್ಲದೆ ಇಲ್ಲ' – ಸಿದ್ಧಿ, ಮಾರ್ಗದರ್ಶನ.

ಅಂಥ ಗುರುವಾದರೂ, 'ಹರನಿಷ್ಠೆಯುಳ್ಳ ಗುರುವರನು, ಒರ್ವನೆ ನರದೈವ' – ಆ ಗುರು ಹರನಿಷ್ಠ, ಮನುಷ್ಯರೂಪಿ ದೈವ.

ಎಷ್ಟು ಮಂದಿ ಸಹಪಾಠಿ ಶಿಷ್ಯರುಗಳಿದ್ದರೂ, ಅವರೆಲ್ಲರೂ ಕುರುಡರಂತೆಯೇ–

"ಬಳ್ಳಿಗುರುಡರು ಕೂಡಿ ಹಳ್ಳವನು ಬಿದ್ದಂತೆ
ಒಳ್ಳೆಯ ಗುರುವಿನುಪದೇಶವಿಲ್ಲದಿರೆ
ಎಲ್ಲಿಯದು ಮುಕ್ತಿ ಸರ್ವಜ್ಞ"

ಪರಸ್ಪರ ಕೈ ಹಿಡಿದುಕೊಂಡು (ಬಳ್ಳಿಗುರುಡರು) ಎದುರಿನ ಹಳ್ಳಕ್ಕೆ ಬೀಳುವುದು ಖಚಿತ. ಗುರುವಿನ ಉಪದೇಶವಿಲ್ಲದಿದ್ದರೆ, ಯಾರೂ ಕಾಪಾಡಲಾರರು.

ಗುರುವಿಂದ ಬಂಧುಗಳು ಗುರುವಿಂದ ದೈವಗಳು
ಗುರುವಿಂದಲಿಹುದುಪುಣ್ಯವದು ಜಗಕೆಲ್ಲ
ಗುರುವಿಂದ ಮುಕ್ತಿ ಸರ್ವಜ್ಞ

ಗುರುಕೃಪೆಯಿಂದ ಬಂಧುಬಳಗ ಲಭ್ಯ; ಗುರುಕೃಪೆಯಿಂದ ದೈವಸಾಕ್ಷಾತ್ಕಾರ, ಇಡೀ ಜಗತ್ತಿಗೇ ಪುಣ್ಯ ಪ್ರಾಪ್ತಿ ಗುರುವಿನ ಕೃಪಾಕಟಾಕ್ಷದಿಂದ. ಗುರುಕೃಪೆಯಿಂದಲೇ ಆಕಾಂಕ್ಷಿಪ ಮುಕ್ತಿ ಲಾಭ.

ವೀರಶೈವದಲ್ಲಿ 'ಗುರುಲಿಂಗ ಜಂಗಮ' ತ್ರಿವಿಧಕ್ಕಿರುವ ಮಹತ್ವವನ್ನು ಮನಗಂಡಾಗ ಸರ್ವಜ್ಞನು ಗುರುವಿಗೆ ಕೊಟ್ಟ ಗೌರವ, ಪೂಜ್ಯ ಸ್ಥಾನ, ಗುರುಸ್ತುತಿ – ಸಹಜವಾಗಿದೆ, ಸ್ವಾಭಾವಿಕವಾಗಿದೆ.

ಸರ್ವಜ್ಞನ ದೀಕ್ಷಾಗುರು ಯಾರು? ಶಿಕ್ಷಣ ಕೊಟ್ಟ ಗುರು ಯಾರು? ಅಥವಾ ಗುರು ಪರಂಪರೆಯೇ ಇದೆಯೇ? ಈ ಪ್ರಶ್ನೆಗಳಿಗೆ ಉತ್ತರ ದೊರೆಯಲಾರದು. ನಾವು ಊಹೆಗೆ ಶರಣಾಗಬೇಕು. "ವರ್ಣಮಾತ್ರಂ

ಕಲಿಸಿದಾತಂ ಗುರು" ಎಂಬ ಮಾತೊಂದಿದೆ. ಆವನಿಗೆ ಬೋಧಿಸಿದ, ಪ್ರಭಾವ ಬೀರಿದ ಅಸಂಖ್ಯಾತ ಗುರುಗಳು ಇದ್ದಿರಬಹುದು.

ಅಪಾರ ಲೋಕಜ್ಞಾನ ಗಳಿಸಿದ ಸರ್ವಜ್ಞನಿಗೆ ಅಪಾರ ವಿನಯವೂ ಇದೆ. "ಸರ್ವರೊಳಗೊಂದೊಂದು ನುಡಿಗಲಿತು" ಎಂದು ಹೇಳಲು ಅವನಿಗೆ ಸಂಕೋಚವಿಲ್ಲ. ಆದ್ದರಿಂದ ಅವನಿಗೆ ಲಭ್ಯವಾದ ಪ್ರತ್ಯಕ್ಷ, ಪರೋಕ್ಷ ಗುರುಗಳ ಪಟ್ಟಿಮಾಡುವುದು ದುಸ್ಸಾಧ್ಯ.

ಬಸವಗುರುವಿನ ಹೆಸರ ಬಲ್ಲವರಾರಿಲ್ಲ
ಪ್ರತಿಮಾತನಾಡಿ ಕೆಡದಿರಿ ಮೂಲೋಕಕ್ಕೆ
ಬಸವನೇ ಕರ್ತ ಸರ್ವಜ್ಞ.

ಹೀಗೆ ಬಸವಾದಿ ಶಿವಶರಣರೆಲ್ಲ ಅವನಿಗೆ ಪರೋಕ್ಷ ಗುರುಗಳೇ, ಅವನ ಸಮಕಾಲೀನರಾದ ಒಬ್ಬರೋ ಅನೇಕರೋ ಪ್ರತ್ಯಕ್ಷ ಗುರುಗಳು ಇದ್ದಿರಬಹುದು.

ಗುರುವಿನ ಉಲ್ಲೇಖವಿರುವ ಸರ್ವಜ್ಞನದೇ ಒಂದು ವಚನವಿದೆ. (ಅದನ್ನು ಪ್ರಕ್ಷಿಪ್ತವೆಂದು ಹೆಚ್ಚಿನ ವಚನಗಳಲ್ಲಿ ಸಂಶೋಧಕರಾದ ಎಲ್.ಬಸವರಾಜುರವರು ಸೇರಿಸಿದ್ದಾರೆ).

ರಾಮನಾಮವೇ ನಾಮ ಸೋಮಶೇಖರ ಗುರುವು
ಆ ಮಹಾರುದ್ರ ಆದಿದೈವ ಜಗದೊಳು
ಭೀಮನೇ ಭಕ್ತ ಸರ್ವಜ್ಞ.

ಇಲ್ಲಿ ಉಕ್ತವಾಗಿರುವ ಸೋಮಶೇಖರನು ತೆಲುಗು ಕವಿ ವೇಮನನಿಗೂ ಗುರುವಾಗಿದ್ದನೆಂದು ಇತಿಹಾಸಕಾರರು ಭಾವಿಸುವುದರಿಂದ ಶ್ರೀ ಉತ್ತಂಗಿಯವರು ಸಹ ಈ ಬಗ್ಗೆ ಸಹಮತ ವ್ಯಕ್ತಪಡಿಸಿದ್ದಾರೆ. "

ಅದು ಹೇಗೂ ಇರಲಿ ಸರ್ವಜ್ಞನಂತ ಬಹುಶ್ರುತ ಕವಿಗೆ ಅನೇಕರು, ಅನೇಕ ಗ್ರಂಥಗಳು, ಪ್ರಕೃತಿ, ಸಮಾಜ, –ಎಲ್ಲವೂ ಗುರುಗಳಾಗಿ ಪರಿಣಮಿಸಿದ್ದರೆ ಆಶ್ಚರ್ಯವಿಲ್ಲ.

ವಿದ್ಯಾಭ್ಯಾಸ ಅಥವಾ ಶಿಕ್ಷಣದ ಮಹತ್ವವನ್ನು ಸ್ವತಹ ಬೋಧಕನಾದ ಸರ್ವಜ್ಞ ಚೆನ್ನಾಗಿಯೇ ಅರಿತಿದ್ದಾನೆ. ಶಿಕ್ಷಣಕ್ಕೆ ಪರ್ಯಾಯವಾದ ಶಬ್ಧಗಳು ಸರ್ವಜ್ಞನಲ್ಲಿ "ಓದು", "ವಿದ್ಯೆ" ಎಂಬವು.

ಶಿಕ್ಷಣ ಬಹುಮುಖಿ. ಪ್ರತ್ಯಕ್ಷವಾಗಿ ಗುರುಮುಖೇನ ಪ್ರಾಪ್ತವಾಗುವುದು ಉಂಟು. ಪರೋಕ್ಷವಾಗಿ ಅಪಾರ ಗ್ರಂಥರಾಶಿಯಿಂದ ಗಳಿಸಬಹುದಾದದ್ದು ಇದೆ. ಪ್ರಕೃತಿ ಅಥವಾ ನಿಸರ್ಗ ನೋಡಿ ಕಲಿಯಬಹುದಾದದ್ದು ಇದೆ. ಇದಲ್ಲದೇ ಧ್ಯಾನದಿಂದ, ಚಿಂತನದಿಂದ ಗಳಿಸಬಹುದಾದ ಪರವಿದ್ಯೆಯು ಇದೆ. ವಿದ್ಯೆ ಅಥವಾ ಶಿಕ್ಷಣದ ಮಹತ್ವವನ್ನು ಸರ್ವಜ್ಞ ಅವನ ಪ್ರಸಿದ್ಧ, ಅಥವಾ ಅತಿ ಪ್ರಚಲಿತ ಉದ್ಧರಿತ ವಚನವೊಂದರಲ್ಲಿ ಹೀಗೆ ಸಾರಿದ್ದಾನೆ.

ವಿದ್ಯೆವುಳ್ಳವನ ಮುಖವು ಮುದ್ದು ಬರುವಂತಕ್ಕು
ವಿದ್ಯೆವಿಲ್ಲದವನ ಬರಿಮುಖವು ಹಾಳೂರ
ಹದ್ದಿನಂತಕ್ಕು ಸರ್ವಜ್ಞ

ಒಬ್ಬ ವಿದ್ಯಾವಂತ ಎದುರಿಗೆ ಬಂದರೆ ಅವನ ಪರಿಚಯವನ್ನು ಯಾರೂ ಮಾಡಿಕೊಡಬೇಕಾಗಿಲ್ಲ; ಅದು ಸ್ವಯಂ ಪ್ರಕಾಶಿತ, ಸ್ವಯಂ ಸ್ಪಷ್ಟ.

ಅವನು ಮೌನವಾಗಿದ್ದರೂ ಮುಖದ ಕಾಂತಿಯೇ ಅವನು ವಿದ್ಯಾವಂತ ಎನ್ನುವುದರ ಮುನ್ಸೂಚನೆ ಕೊಡುತ್ತದೆ. ಅದು ಆಕರ್ಷಕವಾಗಿರುತ್ತದೆ, ಬಯಸುವಂತಿರುತ್ತದೆ. ಪ್ರೀತಿ ಉಕ್ಕುವಂತಿರುತ್ತದೆ, ಅವನು ಬಾಯಿ ತೆರೆಯುವುದು ಬೇಡ, ಅವನು ಬೋಧಿಸುವುದೂ ಬೇಡ, ಅವನು ತನ್ನ ಪಾಂಡಿತ್ಯವನ್ನು ತೋರಿಸುವುದು ಬೇಕಾಗಿಲ್ಲ. ಪ್ರಥಮ ದರ್ಶನದಲ್ಲಿಯೇ ನೋಡುಗರನ್ನು ಗೆಲ್ಲುತ್ತಾನೆ. ಅದಕ್ಕೆ ಪ್ರತಿಯಾಗಿ ವಿದ್ಯಾವಿಹೀನನ ಮುಖ ಹಾಳಾದ ಊರಿನ – ಸಿರಿಪದವಿ, ಜನಪದ ವಿಹೀನ ಬೆಂಗಾಡಾದ, ಕಂಗೆಟ್ಟ, ನರಿಗೂಬೆಗಳ ಆವಾಸಸ್ಥಾನವಾದ – ಬೀಳಾದ ಊರಿನ ಹದ್ದಿನಂತೆ ಭಯಭೀತಿಯನ್ನೂ, ವಿಕರ್ಷಣೆಯನ್ನು ಉಂಟುಮಾಡಿಬಿಡುತ್ತದೆ. ವಿದ್ಯಾವಿಹೀನನಾದವನು ಬಾಲಕೊಂಬುಗಳಿಲ್ಲದ ಪಶುವಲ್ಲದೆ ಮತ್ತೇನು? ಎಂದು ಪ್ರಸಿದ್ಧವಾದ ಲೋಕೋಕ್ತಿಯೇ ಇದೆಯಲ್ಲ.

ಓದಿದ ಓದು ತಾ ಮೇದ ಕಬ್ಬಿನ ಸಿಪ್ಪೆ
ಓದಿನ ಒಡಲನರಿದಿಹರೆ ಸಿಪ್ಪೆ ಕ
ಬ್ಬಾದಂತೆ ಕಾಣೊ ಸರ್ವಜ್ಞ

ಅಪಾರವಾದ ವ್ಯಾಸಂಗದ ಅನುಭವ ಇದೆ, ಶಾಸ್ತ್ರ ಜ್ಞಾನವಿದೆ, ಆ ಜ್ಞಾನ ಭಂಡಾರ ಬೆರಳ ತುದಿಯಲ್ಲಿದೆ, ನಾಲಗೆಯ ಮೊನೆಯಲ್ಲಿದೆ. ಅದರ ರಸವನ್ನು, ತಿರುಳನ್ನು ಗ್ರಹಿಸದೆ ಇದ್ದರೆ ಆ ಸಮಸ್ತ ಓದಿನ ರಾಶಿಯು, ಕಬ್ಬಿನ ಸಿಪ್ಪೆಯಂತೆ, ರುಚಿಹೀನ, ಅಪ್ರಯೋಜಕ. ಓದಿನ ರಸವನ್ನು ತಿರುಳನ್ನು ಗ್ರಹಿಸಿದ್ದರೆ ವ್ಯಾಸಂಗ ಸಿಪ್ಪೆಸಹಿತವಾದ ಕಬ್ಬಾಗುತ್ತದೆ.

ಇದ್ದಲ್ಲಿ ಸಲುವ ಹೋಗಿದ್ದಲ್ಲಿಯೂ ಸಲುವ
ವಿದ್ಯವ ಬಲ್ಲ ಕಡುಜಾಣ, ಗಿರಿಯಮೇ
ಲಿದ್ದರೂ ಸಲುವ ಸರ್ವಜ್ಞ.

ಪ್ರಭುವಿಗೆ (ರಾಜನಿಗೆ ತನ್ನ ಸಾಮ್ರಾಜ್ಯದಲ್ಲಿ ಮಾತ್ರ ಗೌರವ, ಮನ್ನಣೆ, ಪೂಜೆ. ಆದರೆ ವಿದ್ಯಾವಂತನಿಗೆ ಸರ್ವತ್ರ ಮನ್ನಣೆ, ಗೌರವ (ಈ ಅರ್ಥದ ಒಂದು ಸುಭಾಷಿತವೇ ಇದೆ ಅಲ್ಲವೆ?) ವಿದ್ಯಾವಂತನಿಗೆ ಸ್ವಕ್ಷೇತ್ರದಲ್ಲಿಯೂ ಮನ್ನಣೆ, ಗೌರವ, ಒಂದೊಮ್ಮೆ ಆತ ದೂರದ ನಿರ್ಜನ ಬೆಟ್ಟವನ್ನೇರಿದರೂ, ಅಲ್ಲಿ ಎದುರಾಗಬಹುದಾದ ಅಪರಿಚಿತರು ಅವನಲ್ಲಿರುವ ವಿದ್ಯೆಗೆ ಪಾಂಡಿತ್ಯಕ್ಕೆ ಗೌರವ ಕೊಡುತ್ತಾರೆ. ಇದು ವಿದ್ಯೆಗೆ ಇರುವ ಬೆಲೆ, ಮೌಲ್ಯ.

ಪ್ರಾಸಂಗಿಕವಾಗಿ ಬಾಯಿ(ಮುಖ)ಯ ಸಾಮರ್ಥ್ಯವನ್ನು ಕುರಿತು ವಿವೇಚಿಸುತ್ತಾ ಸರ್ವಜ್ಞ ಹೀಗೆ ನುಡಿದಿದ್ದಾನೆ.

ಎಲೆಯ ಮೆಲ್ಲದ ಬಾಯಿ ಹಲವನೋದದ ಬಾಯಿ
ಸಲೆ ನೀಲಕಂಠನ ನೆನೆಯದವನ ಬಾಯಿ
ಬಿಲದ ಬಾಯೆಂದ ಸರ್ವಜ್ಞ.

ಬಾಯಿ (ವಕ್ತ್ರಂ) ಎಂದರೆ ಅದು ಕನಿಷ್ಟ ಮೂರು ಕರ್ಮಗಳಿಗೆ ಒದಗಬೇಕು. ತಾಂಬೂಲವನ್ನು ಮೆಲ್ಲಬೇಕು, ಹಲವಾರು ಗ್ರಂಥಗಳನ್ನು ಓದಬೇಕು, ಪಠಿಸಬೇಕು, ಪರಮಾತ್ಮನನ್ನು ಜಪಿಸಬೇಕು.

ಆಸ್ವಾದನ, ವಾಚನ, ಜಪ – ಇದು ಬಾಯಿಯ ಕೆಲಸ ಇದಕ್ಕೆ ಒದಗದಿದ್ದರೆ ಅದು ಬಾಯಿಯಲ್ಲ, ಇಲಿಗೋ ಹೆಗ್ಗಣಕ್ಕೋ ಆವಾಸ ಸ್ಥಾನವಾದ ಬಿಲ, ಅಷ್ಟೆ! "ವೀಳ್ಯವನ್ನು ಮೆಲ್ಲುವುದು" ಅಭಿಪ್ರಾಯದ, ಆಸಕ್ತಿಯ, ಚಟದ ಹವ್ಯಾಸವಿದ್ದೀತು. ರಸಿಕರಿಗೆ ಪ್ರಿಯವಿದ್ದೀತು! ಎರಡನೆಯದು "ಹಲವನೋದದ ಬಾಯಿ" ಸರ್ವಜ್ಞನು ವಿದ್ಯಾವಂತನಿಂದ ನಿರೀಕ್ಷೆ ಮಾಡುವುದೇನು? ಆತ ಕೂಪ ಮಂಡೂಕವಾಗಿರಬಾರದು. ಅವನ ಅರಿವಿನ ದಿಗಂತ ವಿಸ್ತರಿಸಬೇಕು. ಆದ್ದರಿಂದ ಹಲವಾರು ಜ್ಞಾನದ ಶಾಖೋಪಶಾಖೆಗಳಲ್ಲಿ ಅವನಿಗೆ ಆಸಕ್ತಿ ಇರಬೇಕು, ವಿಷಯ ಸಂಗ್ರಹಿಸಬೇಕು, ಇದು ಅವನ ಅಪೇಕ್ಷೆ, ಆಶಯ. ಆದ್ದರಿಂದಲೇ ಹಲವನೋದದ ಎಂದು ಅವಧಾರಣೆಯೊಡನೆ ನುಡಿದಿದ್ದಾನೆ. ಇನ್ನು ಇಷ್ಟದೇವತಾ ಜಪ! ಅದು ಅವನ ಮನೋಧರ್ಮಕ್ಕೆ ಬಿಟ್ಟ ವಿಚಾರ.

ಮೊದಲನೆಯದು ಶುದ್ಧ ಐಹಿಕವೆನ್ನಬಹುದಾದ ಚಟವಾದರೆ, ಎರಡನೆಯದು, ಮೂರನೆಯದು ಕ್ರಮಾನುಗತವಾಗಿ ಆತ್ಮೋದ್ಧಾರಕ್ಕೆ ಸಾಧನವಾಗುತ್ತದೆ. ವಿದ್ಯಾವಂತನು ತನ್ನ ವಿದ್ಯೆಯನ್ನು ಅಥವಾ ಪಾಂಡಿತ್ಯವನ್ನು ಎಲ್ಲಿ ಪ್ರದರ್ಶಿಸಬೇಕು?

ಅಱುವವನ ಮುಂದೆ ತನ್ನಱುವನೆಱೆಮೆಱೆವುದು
ಅಱುಯದವನ ಮುಂದೆ ಮೆಱೆದಱೆ ಹೊನ್ನಂಬ
ತೊಱೆಯಲಿಚ್ಚಂತೆ ಸರ್ವಜ್ಞ.



ವಿದ್ವಾಂಸನು ವಿದ್ವಾಂಸರ ಸಭೆಯಲ್ಲಿ ತನ್ನ ವಿದ್ಯೆಯನ್ನು ತೆರೆದಿಟ್ಟು ಅವರಿಂದ ಮನ್ನಣೆ ಗಳಿಸಬೇಕು. ಇತರ ವಿದ್ವಾಂಸರಿಗೆ ಇವನ ಅರಿವು ತಿಳಿಯುತ್ತದೆ, ಚರ್ಚಿಸುತ್ತಾರೆ. ಸಂವಹನ, ಸಂವಾದ ಸಾಧ್ಯವಾಗುತ್ತದೆ, ಸಾಧುವಾಗುತ್ತದೆ, ಹೊಸವಿಚಾರ ಮಂಥನದಿಂದ ಸಿದ್ಧಿಸುವ ಸಂಭವವುಂಟು. ಅದು ಬಿಟ್ಟು ಅವಿದ್ಯಾವಂತರ ಸಮೂಹದಲ್ಲಿ, ಅಶಿಕ್ಷಿತರ, ಅಜ್ಞಾನಿಗಳ ಸಮಾವೇಶದಲ್ಲಿ ಇವನು ತನ್ನ ಪಾಂಡಿತ್ಯವನ್ನು ಹರಹಿದರೆ ಅದು ವ್ಯರ್ಥ. ಅವರಿಗೂ ಪ್ರಯೋಜನವಿಲ್ಲ; ಇವನಿಗೂ ಪ್ರಯೋಜನವಿಲ್ಲ.

ಇವನ ಕಷ್ಟಾರ್ಜಿತ ಜ್ಞಾನ/ತಿಳುವಳಿಕೆ/ವಿದ್ಯೆ ಅಮೂಲ್ಯವಾದ ಚಿನ್ನದಂತೆ. ಆದರೆ ಅದನ್ನು ನದಿಯ ಪಾಲು ಮಾಡಿದರೆ ವ್ಯರ್ಥ, ಅಪ್ರಯೋಜಕ.

ವಿದ್ಯೆ ಎಂಬುದು ಅಪಾರ ಸಾಗರ. ಅದಕ್ಕೆ ತುದಿ ಮೊದಲಿಲ್ಲ. ಆದ್ದರಿಂದ ನಾನು ವಿದ್ಯಾವಾರಿಧಿ, ವಿದ್ಯಾತೀರ್ಥ ಎಂದು ಗರ್ವಿಸಲು ಸಲ್ಲ. ಒಂದು ವಚನದಲ್ಲಿ ಸಾಂದರ್ಭಿಕವಾಗಿ "ವಿದ್ಯೆ ಅನಂತ", ಅಮೇಯ, ಅಪಾರ ಎಂದು ಸಾರಿ ಹೇಳಿದ್ದಾನೆ. ಆ ವಚನದಲ್ಲಿ ಪ್ರಕಾರಾಂತವಾಗಿ ವಿದ್ಯೆಯ ವಿಷಯ ಪ್ರಸ್ತಾಪಿತವಾಗಿದೆ.

ವಿದ್ಯಕ್ಕೆ ಕಡೆಯಿಲ್ಲ; ಬುದ್ಧಿಗೆ ಬೆಲೆಯಿಲ್ಲ
ಛಿದ್ರಿಸುವವಗೆ ಗತಿಯಿಲ್ಲ ಮರಣಕ್ಕೆ
ಮದ್ದುಗಳಿಲ್ಲ ಸರ್ವಜ್ಞ

ವಿದ್ಯೆ, ಬುದ್ಧಿ (Intelect), ಶಿಕ್ಷಣ(Education)ಕ್ಕೆ ಕೊನೆಯೆಂಬುದಿಲ್ಲ, ಎಷ್ಟು ಗಳಿಸಿದರೂ, ಮತ್ತಷ್ಟು ಉಳಿದಿರುತ್ತದೆ. ಅದು ಅನಂತ, ಅಪಾರ, ದುಸ್ಸಾಧ್ಯ ; ಬುದ್ಧಿಯೂ ಅಷ್ಟೇ, ಅದನ್ನು ತೂಗಿ ಬೆಲೆ ಕಟ್ಟಲಾಗದು, ಅದು ಮೌಲ್ಯಾತೀತ. ಈ ವಚನದ ಇತರ ಪ್ರಸ್ತಾಪಗಳು ಎಳೆದು ತಂದಂತಿವೆ. ವಚನದ ಸಂದರ್ಭಕ್ಕೆ ಹೊರಚ್ಚಾಗಿ ನಿಲ್ಲುತ್ತವೆ. ಕತ್ತೆಗೆ ಬುದ್ಧಿಯಿಲ್ಲ; ಮೊಲಕ್ಕೆ ಕೋಡಿಲ್ಲ; ನಾಯಿಗೆ ರೆಕ್ಕೆಯಿಲ್ಲ ಎಂದು ಅಸಂಬದ್ಧವಾಗಿ ಬರೆಯುತ್ತಾ ಹೋಗಬಹುದು. ಸರ್ವಜ್ಞನ ಕೆಲವಾದರೂ ವಚನಗಳು ಹೀಗೆ ಅಸಂಬದ್ಧವಾಗಿವೆ ಎಂದು ಹೇಳದೆ ವಿಧಿಯಿಲ್ಲ.

ಮತ್ತೊಂದು ವಚನದಲ್ಲಿ "ಓದು" ಅಥವಾ ವಿದ್ಯೆಯ ಪ್ರಸ್ತಾಪವಿದೆ. ವಿದ್ಯಾರ್ಜನೆ, ಪಾಂಡಿತ್ಯ ಗಳಿಕೆ ತನ್ನಷ್ಟಕ್ಕೆ ಸಮಗ್ರ ಅಲ್ಲ. ಅದು ಮತ್ತೊಂದಕ್ಕೆ ದಾರಿ, ಗುರಿಮುಟ್ಟಲು ನಿಮಿತ್ತ ಎಂಬ ಚಿಂತನ ಇಲ್ಲಿರುವಂತಿದೆ.

ಹಲವನೋದಿದಡೇನು? ಚೆಲುವನಾದಡೇನು?
ಕುಲವೀರನೆನಿಸಿ ಫಲವೇನು, ಲಿಂಗದ
ಒಲುಮೆ ಇಲ್ಲದಲೆ ಸರ್ವಜ್ಞ

ಶಿಕ್ಷಣ, ಓದು, ಪಾಂಡಿತ್ಯ ಸಂಪಾದನೆಯ ಉದ್ದೇಶ, ಹಾಗೆಯೇ ಪ್ರಕೃತಿದತ್ತವಾದ ರೂಪ, ತನ್ನ ಸಮುದಾಯದ ನಾಯಕ ಮಣಿಯಾಗಿ, ನೇತಾರನಾಗಿ ಮೇಲೇರಲು ಮಾಡಿದ ಪ್ರಯತ್ನ. ಎಲ್ಲವೂ ಲಿಂಗಾಂಗ ಸಾಮರಸ್ಯವನ್ನು ಸಾಧಿಸುವ ಶ್ರದ್ಧಾನೋದ್ದೇಶಕ್ಕೆ ಸಹಕಾರಿ ಅಥವಾ ಪೂರಕ ಮಾತ್ರ ಎಂಬುದು ಇಲ್ಲಿನ ವಿವಕ್ಷೆ.

ಇದು ಭಾರತೀಯ ಸಂಸ್ಕೃತಿಯ ಉದಾತ್ತ ಚಿಂತನಗಳಲ್ಲಿ ಒಂದಾಗಿದೆ. ಅದರ ನೆರಳಿನಲ್ಲಿಯೇ ನಡೆದಿದೆ. ಮತ್ತೊಂದು ವಚನದಲ್ಲಿ ಇದೇ ಅರ್ಥದ ಛಾಯೆ ಮುಂದುವರಿದಿದೆ.

ಅಲ್ಲಿ ಗುರುಕೃಪೆಗೆ ಹಾತೊರೆಯುವ ಶಿಷ್ಯನ ಪ್ರಾರ್ಥನೆ ಇದು. ಮೊರೆ ಇದು.

ಹಲವು ಶಾಸ್ತ್ರವನೋದಿ ಬಲೆಯೆನಗೆ ಬಿಡಲಿಲ್ಲ
ಮಲರಹಿತನಾದ ನಾನು ಗುರುರಾಯ ಎನಗೊಲಿದು
ಮಲವ ಹರಿಸೆನ್ನ ಸರ್ವಜ್ಞ

ಹಲವು ಶಾಸ್ತ್ರಗಳಲ್ಲಿ ಬಲ್ಲಿದನಾದರೂ ಬಂಧಮೋಕ್ಷವಿಲ್ಲ, "ಮಲ"ಗಳಿಂದ ಬಿಡುಗಡೆಯಿಲ್ಲ; ಗುರುಕೃಪೆಯು ಅದಕ್ಕೆ ಪರಮೌಷಧ – ಎಂದು ಶಿಷ್ಯ "ಗುರು"ವಿನಲ್ಲಿ ಬೇಡುತ್ತಾನೆ. ಗುರುವಿನ ಪ್ರಾಮುಖ್ಯವನ್ನು ಎತ್ತಿ ಹಿಡಿಯುವುದು ಈ ವಚನದ ಆಶಯವಾದರೂ ಪ್ರಾಸಂಗಿಕವಾಗಿ "ಶಾಸ್ತ್ರವೇತ್ತ" ಪಂಡಿತ/ವಿದ್ವಾಂಸನ ಪ್ರಸ್ತಾಪವಿದೆ. ಹಾಗೆಯೇ ಯೋಗಿಯ ಲಕ್ಷಣವನ್ನು ಹೇಳುವಲ್ಲಿ ಪ್ರಾಸಂಗಿಕವಾಗಿ ಓದಿನ ಪ್ರಸ್ತಾಪವಿದೆ.

ಓದಿ ಬೂದಿಯ ಪೂಸಿ, ತೇದು ಕಾವಿಯ ಹೊದೆದು
ಹೋದಾತ ಯೋಗಿಯೆನಬೇಡ, ಇಂದ್ರಿಯವ
ಕಾದಾತ ಯೋಗಿ ಸರ್ವಜ್ಞ

ಅನೇಕ ಗ್ರಂಥಗಳನ್ನು ಅಧ್ಯಯನ ಮಾಡಿ, ವಿಭೂತಿ ಧರಿಸಿ, ಕಾವಿ ಹೊದ್ದು ನಡೆದವವನ್ನು ಯೋಗಿ ಎನ್ನಲಾಗದು. ಇಂದ್ರಿಯಗಳನ್ನು ಗೆದ್ದವನೇ ಯೋಗಿ – ಎಂದು ವ್ಯಾಖ್ಯಾನಿಸಿದ್ದಾನೆ.

ಯೋಗಿಯಾದವನಿಗೆ ಪುಸ್ತಕದ ಓದು, ಶಾಸ್ತ್ರಜ್ಞಾನ ಬೇಡ ಅನ್ನುವಂತಿಲ್ಲ, ಆದರೆ ಅದರಾಚೆ 'ಏನೋ'ಇದೆ. ಅದನ್ನು ಸಾಧಿಸಬೇಕು ಎಂಬುದು ಈ ವಚನದ ಸಾರ. ಒಟ್ಟಿನಲ್ಲಿ ಲೌಖಿಕ ವಿದ್ಯೆ, ಶಾಸ್ತ್ರಜ್ಞಾನ, ತತ್ತ್ವಜ್ಞಾನ – ಎಲ್ಲವೂ "ಪರಮಜ್ಞಾನ"ಕ್ಕೆ ವಿಧೇಯವಾಗಿರಬೇಕು, ಪೂರಕವಾಗಿರಬೇಕು ಎಂಬುದೇ ಗಮ್ಯ.

ಲೌಖಿಕ ವಿದ್ಯೆಗಳಿಗೂ ಅದರದೇ ಆದ ಸ್ಥಾನಮಾನಗಳಿವೆ, ಉದ್ದೇಶಗಳಿವೆ. ಅಂತಹ ಲೌಖಿಕ ವಿದ್ಯೆಗಳಲ್ಲಿ ವ್ಯವಸಾಯಕ್ಕೆ ಪ್ರಥಮ ಸ್ಥಾನ, ಆದ್ಯತೆ. ಎಲ್ಲ ಚಟುವಟಿಕೆಗಳ ಮೂಲ, ಆಧಾರ, ಅವಲಂಬನ ಅದೇ ಆಗಿದೆ.

ಸರ್ವಜ್ಞನ ತುಂಬಾ ಪ್ರಸಿದ್ಧವಾದ, ಸಾರ್ಥವಾದ, ಸಾರ್ಥಕವಾದ(ಯಶಸ್ವಿ), ಅಡಕವಾದ ಅಭಿವ್ಯಕ್ತಿಯಿಂದ ಕೂಡಿರುವ, ಅತಿ ಉದ್ಧರಿತ ವಚನಗಳಲ್ಲಿ ಒಂದು ಇದು.

ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆಯೇ ಮೇಲು
ಮೇಟಿಯಿಂ ರಾಟಿ ನಡೆದುದಲ್ಲದೆ ದೇಶ
ದಾಟವೇ ಕೆಡುಗು ಸರ್ವಜ್ಞ

ಇಲ್ಲಿ "ಕೋಟಿ"ಎಂಬುದು ಔಪಚಾರಿಕ ಶಬ್ದ. ಅನೇಕ ವಿದ್ಯೆ ಎಂದರ್ಥ. ವಿದ್ಯೆ ಎಂದರೆ ಪುಸ್ತಕದ ಓದೇ ಆಗಬೇಕಾಗಿಲ್ಲ. ಅನುಭವದಿಂದ, ಅಭ್ಯಾಸದಿಂದ, ದೇಹ ಶ್ರಮದಿಂದ ಸಾಧಿಸಿಕೊಂಡ ಕಲೆ, ಕೌಶಲವು ವಿದ್ಯೆಯೇ. ವ್ಯವಸಾಯ ಒಂದು ಪ್ರಾಯೋಗಿಕ ಕೌಶಲ. ಎಲ್ಲ ವಿದ್ಯೆಗಳಲ್ಲಿ ಪ್ರಪ್ರಥಮ ಸ್ಥಾನ ಸಲ್ಲಬೇಕಾದದ್ದು ಕೃಷಿಗೆ. ಕೃಷಿಯೇ ಎಲ್ಲಾ ಚಟುವಟಿಕೆಗಳ ಮೂಲ. ಮೇಟಿ ಹಿಡಿದರೆ, ರಾಟೆ ತಿರುಗುತ್ತದೆ, ಗಾಣ ಸುತ್ತುತ್ತದೆ. ಅದರಲ್ಲು ಭಾರತದಂತಹ ಕೃಷಿ ಪ್ರಧಾನ ರಾಷ್ಟ್ರಗಳಲ್ಲಿ ಕೃಷಿಯ ಅನಿವಾರ್ಯತೆ, ಪ್ರಾಧಾನ್ಯ ಅದರ ಪರಿಣಾಮಗಳನ್ನು ಯಾರೂ ತಿಳಿಯಬಹುದು. ಕೃಷಿ ಸಮಾಜದ ಮೂಲಭೂತ ಅಗತ್ಯಗಳನ್ನು ಪೂರೈಸಿ ಜೀವನರಥ ಚಲಿಸಲು ಕಾರಣವಾಗಿದೆ.

ಆದ್ದರಿಂದ ಕೃಷಿ ವಿಜ್ಞಾನ, ಕೃಷಿಯ ಚಟುವಟಿಕೆ ವಿದ್ಯಾಭ್ಯಾಸ ಸಮೂಹದಲ್ಲೇ ಗಣನೀಯ, ಮಾನ್ಯ.

ಮತ್ತೊಂದು ಸುಪ್ರಸಿದ್ಧ ವಚನದಿಂದ ಈ ವಿದ್ಯೆಯನ್ನು ಕುರಿತಾದ ಸರ್ವಜ್ಞನ ಚಿಂತನೆಗಳಿಗೆ ಕೊನೆ ಹಾಡಬಹುದು.

ಅಕ್ಕರವೀಲೆಕ್ಕವು ತರ್ಕತಾಗಣಿತಕ್ಕೆ
ಮಿಕ್ಕ ಓದುಗಳು ತಿರಿಕೆಗೆ – ಮೋಕ್ಷಕಾ
ಅಕ್ಷರವೇ ಸಾಕು ಸರ್ವಜ್ಞ

ಷಡಕ್ಷರಿ ಮಂತ್ರ ಜಪವೇ ಜೀವನದ ಪರಮ ಪುರುಷಾರ್ಥ, ಅಕ್ಷರ ವಿದ್ಯೆ, ಗಣಿತ, ಮಿಕ್ಕ ಎಲ್ಲ ವಿದ್ಯೆಗಳು ಕೇವಲ ಹೊಟ್ಟೆಯ ಪಾಡಿಗಾಗಿ. ಆದರೆ ಮೋಕ್ಷ ಸಾಧನೆಗೆ ಆರು ಅಕ್ಷರಗಳೇ ಸಾಕು ಎಂದಿದ್ದಾನೆ. ಇದರ ಪಾಠಾಂತರದಲ್ಲಿ ಮೋಕ್ಷಕ್ಕೆ ಎರಡಕ್ಕರವೇ ("ಹರ") ಸಾಕು ಎಂದಿದೆ.

ಅತ್ಯಂತ ಒರಟಾಗಿ ಎಲ್ಲ ಜೀವನೋಪಾಯಕ್ಕೆ ಕಾರಣವಾದ ವಿದ್ಯೆಗಳನ್ನು ಜರಿದಿದ್ದರೂ ಆತ ಸತ್ಯವನ್ನೇ, ಅಪ್ರಿಯ ಸತ್ಯವನ್ನೇ ಹೇಳಿದ್ದಾನೆ.

ಅದು ಅವನ ರೀತಿ, ನೀತಿ, ಮತಿ. ನಿಧಾನವಾಗಿ ವಿಚಾರಮಾಡಿ ನೋಡಿದಾಗ ಅವನ ಮಾತಿನ ಅಂತರಾರ್ಥ ಸ್ಫುರಿಸುತ್ತದೆ.

### ೩.೫ ವಿವಿಧ ಕಾಯಕ ಅಥವಾ ವೃತ್ತಿಗಳ ಬಗ್ಗೆ ಸರ್ವಜ್ಞನ ವಿಚಾರಗಳು

ಸರ್ವಜ್ಞ ಗೃಹಸ್ಥಾಶ್ರಮಿಯಾಗಿದ್ದು ಅನಂತರ ವಿರಕ್ತನಾದನೋ ಅಥವಾ ಹುಟ್ಟು ವಿರಕ್ತನೋ ತಿಳಿಯದು. ಖಚಿತವಾದ ಆಧಾರಗಳ, ಪ್ರಸ್ತಾಪಗಳ ಅಭಾವದಲ್ಲಿ ವಿದ್ವಾಂಸರು ತಮ್ಮ ಸ್ವಕಪೋಲಕಲ್ಪಿತ ಘಟನಾವಳಿಗಳನ್ನು, ಸಂಭವಗಳನ್ನು ಅವನಿಗೆ ಆರೋಪಿಸಿರುವುದುಂಟು. 'ಸರ್ವಜ್ಞ ಬ್ರಹ್ಮಚಾರಿಯಾಗಿದ್ದನೆಂದು ಹೇಳಲಿಕ್ಕಾಗದು, ಶಬ್ದ ಸ್ಪರ್ಶರೂಪರಸಗಂಧಾದಿಗಳ ವ್ಯಾಮೋಹಕ್ಕೆ ಆತ ಒಳಗಾಗಿರಲಿಲ್ಲವೆಂದು ಹೇಳುವುದು ಅಷ್ಟೇನೂ ಸಮಂಜಸವಲ್ಲ. ಆತನ ವಚನಗಳಲ್ಲಿ ಪಂಚೇಂದ್ರಿಯಗಳಿಗೆ ಅವಶ್ಯಕವಾದ ಮೇವು ಸಾಕಷ್ಟು ಅಡಕವಾಗಿದೆ. ಸ್ತ್ರೀಸಂಗದಲ್ಲಿದ್ದುಕೊಂಡು ಕುಟುಂಬ ಜೀವನದ ಕಷ್ಟಸುಖಗಳನ್ನು ಆತ ಅನುಭವಿಸಿರಲೇಬೇಕು. ನಂತರ ಸಂಸಾರದಲ್ಲಿ ಆತನಿಗೆ ಬೇಸರವುಂಟಾಗಿ ವಿರಾಗಿಯಾಗಿ ಜೀವನದ ಕಡೆಯ ದಿನಗಳನ್ನು ಶಿವಧ್ಯಾನದಲ್ಲಿ ಕಳೆದಿರಬೇಕು'. ಅವನು ವಿರಕ್ತನೆಂದರೆ ಎಲ್ಲೋ ವನಾಂತರವನ್ನೋ, ಗಿರಿಶಿಖರವನ್ನೋ ಸೇರಿ ಏಕಾಂತವಾಸಿಯಾಗಿದ್ದನೆಂದು ತಿಳಿಯುವಂತಿಲ್ಲ. ಆತ ಸಮಾಜದ ನಡುವೆ, ಅದರಲ್ಲೂ ಜನಸಾಮಾನ್ಯರ ನಡುವೆ, ಶ್ರೀಸಾಮಾನ್ಯನಾಗಿದ್ದು ಅವರ ಕಷ್ಟಸುಖಗಳಿಗೆ ಸ್ಪಂದಿಸುತ್ತಾ, ಬೋಧಿಸುತ್ತಾ, ಪರಿಹಾರ ಸೂಚಿಸುತ್ತಾ ಬಾಳಾಟ ಮಾಡಿದನೆಂಬುದಂತು ಸತ್ಯ. ಅದಕ್ಕೆ ಅವನ ವಚನ ಸಮಸ್ತದಲ್ಲಿ ಅಪಾರ ದೃಷ್ಟಾಂತಗಳಿವೆ. ಪುರಾವೆಗಳಿವೆ.

"ಪದ್ಮಪತ್ರ ಇವಂಬಸಿ" (ತಾವರೆಯ ದಳದ ಮೇಲಿನ ನೀರ ಹನಿಯಂತೆ) ಇದ್ದುದರಿಂದಲೇ ಲೋಕದೃಷ್ಟಿ, ಸಾಕ್ಷಿಪ್ರಜ್ಞೆ ಅವನಿಗೆ ದಕ್ಕಿದೆ.

ನೀತಿಬೋಧೆ ಮಾತ್ರ ಅವನ ಉದ್ದೇಶವಾಗಿರಲಿಲ್ಲ; ಸಮಾಜದಲ್ಲಿ ಕಂಡದ್ದನ್ನು ದಾಖಲಿಸುವ ಕವಿಹೃದಯ ಅವನಿಗಿದೆ. ಜಾನಪದರ ಸಮಸ್ತ ದೈನಂದಿನ ಚಟುವಟಿಕೆಗಳನ್ನು ಹತ್ತಿರದಿಂದ ಗಮನಿಸಿದ್ದಾನೆ, ಪ್ರತಿಕ್ರಿಯಿಸಿದ್ದಾನೆ. ನೂರೆಂಟು ವೃತ್ತಿನಿರತರನ್ನು ಅವರ ಒಳಹೊರಗನ್ನು ಬಲ್ಲವನಾಗಿದ್ದಾನೆ. ಅವನ ಅಭಿಪ್ರಾಯಗಳು, ಗ್ರಹಿಕೆಗಳು ಸರ್ವಸಮರ್ಪಕವಾಗಿಲ್ಲದಿರಬಹುದು. ಅದು ಬೇರೆ ಮಾತು. ಅನೇಕ ಸಂದರ್ಭಗಳಲ್ಲಿ ಪ್ರಚಲಿತ ಜನಾಭಿಪ್ರಾಯವನ್ನು ಮನ್ನಿಸಿರಬಹುದು. ಅನೇಕ ಅಭಿಪ್ರಾಯಗಳು ಲೋಕಾಭಿರಾಮವಾಗಿಯೋ, ತಾತ್ಕಾಲಿಕವಾಗಿಯೋ ಮೂಡಿಬಂದಿರಬಹುದು (casual and tentative). ಇಡೀ ವೃತ್ತಿನಿರತ ಒಂದು ಸಮುದಾಯವನ್ನು, ಬೀಸುಮಾತುಗಳಲ್ಲಿ ಉಡಾಫೆ ಹೇಳಿಕೆಗಳಲ್ಲಿ ವರ್ಣಿಸಿರುವುದು ಸತ್ಯದೂರ, ಅನುದಾರ ಅಥವಾ ಪೂರ್ವಾಗ್ರಹಪೂರಿತ ಎಂದು ನಮಗಿಂದು ಅನ್ನಿಸಿದರೆ ಆಶ್ಚರ್ಯವಿಲ್ಲ.

ಭಾರತೀಯ ಸಮಾಜದಲ್ಲಿ ಅದರಲ್ಲೂ ಪ್ರಾಚೀನ ಹಾಗೂ ಮಧ್ಯಕಾಲೀನ ಸಮಾಜದಲ್ಲಿ ಜಾತಿಗೂ, ವೃತ್ತಿಗೂ ಸಂಬಂಧವಿದ್ದುದರಿಂದ ಅವನು ವೃತ್ತಿಯ ಬಗ್ಗೆ ಮಾಡಿದ ಟೀಕೆ ಜಾತಿಗೂ ಅನ್ವಯವಾಗುತ್ತದೆ. ಅದರಲ್ಲೂ 'ಶೂದ್ರರು' ಎನ್ನುವ ನಾಲ್ಕನೆಯ ವರ್ಣದಲ್ಲಿ ನೂರೆಂಟು ಕಾರ್ಯ/ವೃತ್ತಿನಿರತರು ಇದ್ದು, ಅವರ ವೃತ್ತಿಯಿಂದ ಜಾತಿ ಅಥವಾ ಜಾತಿಯಿಂದ ವೃತ್ತಿಬದ್ಧವಾಗಿರುತ್ತದೆ. ಮೇಲಿನ ಮೂರುವರ್ಣಗಳಿಗೆ ನಿರ್ದಿಷ್ಟವಾದ ಪ್ರಶ್ನೆ, ವೃತ್ತಿಧರ್ಮ ಅಂಟಿಕೊಂಡಿರುತ್ತದೆ. ಸರ್ವಜ್ಞ ಬಹುತೇಕ ವೃತ್ತಿಗಳನ್ನು, ವೃತ್ತಿನಿರತರನ್ನು ಕುರಿತು ಬರೆದಿದ್ದಾನೆ.

"ಕೋಟಿ ವಿದ್ಯಗಳಲ್ಲಿ ಮೇಟಿ ವಿದ್ಯೆಯೇ ಲೇಸು" ಎಂಬ ಅವನ ಪ್ರಸಿದ್ಧ ಹೇಳಿಕೆಯನ್ನು ನಾವು ಬಲ್ಲೆವು. ಇದು ಕೃಷಿಕರನ್ನು ಕುರಿತದ್ದು. ಕೃಷಿ ಒಂದು ವೃತ್ತಿ, ಸಾಮಾನ್ಯವಾಗಿ ಕರ್ನಾಟಕದಲ್ಲಿ ಕೃಷಿಕರನ್ನು 'ಒಕ್ಕಲಿಗ' ಎನ್ನುತ್ತಾರೆ. ಅದು ಶೂದ್ರವರ್ಣದಲ್ಲಿ ಒಂದು ಜಾತಿಯೂ ಹೌದು, [ಕ್ವಚಿತ್ತಾಗಿ ಬ್ರಾಹ್ಮಣನೋ, ಕುರುಬನೋ, ವೈಶ್ಯನೋ ಕೃಷಿಗೆ ಕೈಹಾಕಿರಲೂಬಹುದು.] ಆಧುನಿಕಯುಗದಲ್ಲಿ ಈ 'ವರ್ಣಸಂಕರ' ಸಾಮಾನ್ಯ. ಬೇಸಾಯವನ್ನು ಕುರಿತು ನಾಲ್ಕಾರು ವಚನಗಳಲ್ಲಿ ಪ್ರಸ್ತಾಪಿಸಿದ್ದಾನೆ. ಕೃಷಿ ಚಟುವಟಿಕೆ, ಕೃಷಿ ಜ್ಞಾನ, 'ವಿದ್ಯೆ'ಗಳಲ್ಲಿ ಶ್ರೇಷ್ಠವೆಂಬುದು ಅವನ ಗ್ರಹಿಕೆ. ಅದರ ಪ್ರಸ್ತಾಪ ಈ ನಿಬಂಧದಲ್ಲಿ ಈಗಾಗಲೇ ಬಂದಿದೆ.

ಆ ಬಗ್ಗೆ ಹೆಚ್ಚಿನ ವಿವರಗಳನ್ನು ಇಲ್ಲಿ ಪರಿಶೀಲಿಸಬಹುದು.

ಎತ್ತೊಮ್ಮೆ ಹೂಡುವುದು, ಉತ್ತೊಮ್ಮೆ ಹರಗುವುದು
ಬಿತ್ತೊಮ್ಮೆ ಹಾಗಿ ಕಳೆದರಾ ಬೆಳೆಯು
ಎತ್ತಗೈಯುದ್ದ ಸರ್ವಜ್ಞ

ಕೃಷಿಕರಿಗೆ ಉಪಯುಕ್ತ ಸಲಹೆ ಕೊಡುತ್ತಿದ್ದಾನೆ. ಎತ್ತು ಎಮ್ಮೆ ಹೂಡುವುದು, ಉಳುವುದು, ಹರಗುವುದು – ಈ ಕೃಷಿ ಸಂಬಂಧ ಶಬ್ಧಗಳನ್ನು ಗಮನಿಸಬೇಕು. ಸದಾ ಕೃಷಿಕರ್ಮದಲ್ಲಿ ನಿರತನಾಗಿರಬೇಕು, ಎಂದು ಸೂಚನೆ ಕೊಟ್ಟಿದ್ದಾನೆ.

ನಲ್ಲೆತ್ತು ಬಲುಭಂಡಿ ಇಲ್ಲದವನಾರೆಂಬ
ಕಲ್ಲುಕಳೆಗಳನು ಬಿಟ್ಟವ – ಹೊಲದೊಳು
ಹುಲ್ಲನೇ ಬೆಳೆವ ಸರ್ವಜ್ಞ

ರೈತನಿಗೆ ಅಗತ್ಯ ಸಾಧನಗಳೆಂದರೆ ದೃಢವಾದ ಎತ್ತುಗಳು, ಬಂಡಿ, ಅದಿಲ್ಲದೆ ಆರಂಭ ಮಾಡಲಾಗದು, ಶ್ರಮವಹಿಸಿ ಕ್ಷೇತ್ರಪಾಲನೆ ಮಾಡಬೇಕು, ಕಲ್ಲುಕಳೆಗಳನ್ನು ನಿವಾರಿಸಬೇಕು, ಇಲ್ಲದಿದ್ದರೆ ಬೆಳೆ ಕೈಗೆ ಬರುವುದಿಲ್ಲ, ಬರೀ ಹುಲ್ಲೇ ತುಂಬಿಕೊಳ್ಳುತ್ತದೆ ಎಂದಿದ್ದಾನೆ.

ಇನ್ನೊಂದು ವಚನಭಾಗದಲ್ಲಿ ಉಪಮಾನವಾಗಿ ಈ ವಾಕ್ಯ ಬಂದಿದೆ.

"ಹರಗಿ ಬಿತ್ತದ ಹೊಲನು ಹಿರಿದಾಗಿ ಬೆಳೆವುದೇ" ಎಂದು ಪ್ರಶ್ನಿಸಿದ್ದಾನೆ.

ಮತ್ತೂ ಒಂದು ವಚನದಲ್ಲಿ ಕೃಷಿಯನ್ನು ಕುರಿತು ಪ್ರಸ್ತಾಪಿಸುತ್ತಾ "ಹರಗದ ಎತ್ತು", ಬರಡಾದ ಹಯನು, ಹರಟೆ ಹೊಡೆಯುವ ಮಗ ಇದ್ದರೆ ಹೊಲದಲ್ಲಿ ಬೆಳೆ ಹಾಳು ಎಂದು ಎಚ್ಚರಿಸಿದ್ದಾನೆ. ಎತ್ತು, ಹಸುಗಳಿದ್ದರೆ ಸಾಲದೆ, ಶ್ರಮವಹಿಸಿ ದುಡಿಯುವ ಮಗನು ಬೇಕು ಎಂಬುದು ಅವನ ಅಭಿಪ್ರಾಯ. ಮತ್ತೊಂದು ವಚನ ಭಾಗದಲ್ಲಿ

. . . . . . . . . . . . . . . . . . . .
ನಕ್ಕು ನಗಿಸುವ ನುಡಿಲೇಸು, ಊರಿಂಗೆ
ಒಕ್ಕಲಿಗ ಲೇಸು ಸರ್ವಜ್ಞ – ಎಂದಿದ್ದಾನೆ.

ಒಕ್ಕಲಿಗನ ಕುಟುಂಬ ಇದ್ದರೆ ವ್ಯವಸಾಯ, ವ್ಯವಸಾಯ ವೃದ್ಧಿಯಾದರೆ ಇತರ ಚಟುವಟಿಕೆಗಳು, ವ್ಯಾಪಾರ, ವ್ಯವಹಾರ, ಹೀಗೆ ಬದುಕಿನ ಚಕ್ರ ಚಲಿಸುತ್ತದೆ. ಸರ್ವಜ್ಞನ ವಚನ ಸಮುದಾಯದಲ್ಲಿ ಅಲ್ಲಲ್ಲಿ ಉದಾಹರಣೆಯಾಗಿಯೇ ಕೃಷಿಗೆ ಸಂಬಂಧಪಟ್ಟ ವಿಚಾರ ತಲೆಹಾಕುತ್ತದೆ. ಉದಾ: "ತಿದ್ದದ ಹೋರಿ ಉಳಹೊಲ್ಲ" ಎಂಬ ಸಾಲು ಒಂದು ವಚನಭಾಗವಾಗಿ ಕಾಣಿಸಿಕೊಂಡಿದೆ. ಕೃಷಿಕ ಅಥವಾ ಒಕ್ಕಲಿಗನನ್ನು ಕುರಿತಷ್ಟು ವಿವರವಾಗಿ ಅಲ್ಲದಿದ್ದರೂ, ಒಂದೆರಡು ವಚನಗಳಲ್ಲಿ ಇತರ ಅನೇಕ ವೃತ್ತಿಗಳನ್ನು ಕುರಿತ, ವೃತ್ತಿಪರರನ್ನು ಕುರಿತ ಹೇಳಿಕೆಗಳು ಸಿಗುತ್ತವೆ.

\

ಅಕ್ಕಸಾಲಿಗರ ಕುರಿತು:

ಅವು ಎಲ್ಲ ಸಂದರ್ಭಗಳಲ್ಲೂ ತೂಕದ ಹೊಣೆಗಾರಿಕೆಯ ಮಾತುಗಳಾಗಿ ಇಲ್ಲ ಎಂಬುದನ್ನು ಅಗತ್ಯವಾಗಿ ದಾಖಲಿಸಬೇಕು. ಅಕ್ಕಸಾಲೆ ಅಥವಾ ಅಕ್ಕಸಾಲಿಗನ ಕುರಿತ ಅವನ ಅಭಿಪ್ರಾಯಗಳು ಕೇವಲ ಲಹರಿಯ, ನಾಡಾಡಿಗಳ ಮಾತುಗಳಾಗಿವೆ. ಚಿನ್ನಾಭರಣಗಳನ್ನು, ಬೆಳ್ಳಿಯ ಆಭರಣಗಳನ್ನು ಹೆಣ್ಣುಮಕ್ಕಳು ಧರಿಸುವುದು, ಅಷ್ಟೇಕೆ, ಗಂಡಸರು ಉಂಗುರ, ಕೈಯಕಪ್ಪಗಳನ್ನು ಧರಿಸುತ್ತಿದ್ದುದರಿಂದ ಗುಡಿಯ ದೇವರ ಅಲಂಕಾರಕ್ಕೆ ಚಿನ್ನಾಭರಣಗಳು ಅಗತ್ಯವಾಗಿರುವುದರಿಂದ ಅದೊಂದು ಪ್ರಧಾನವೃತ್ತಿಯೇ! ಗ್ರಾಮಗಳಲ್ಲಂತೂ ಅಕ್ಕಸಾಲಿಗನ ಸಂಪರ್ಕ ಎಲ್ಲ ಕುಟುಂಬಕ್ಕೂ ಇದ್ದದ್ದೇ. ಸರ್ವಜ್ಞ ಅಂಥ ಅಕ್ಕಸಾಲಿಗನನ್ನು "ಊರಿಗವ ರಕ್ಕಸ", "ಬೆಕ್ಕು ಬಂದು ಇಲಿಯ ಹಿಡಿವಂತೆ" ಅವನ ಕಾಟ, ವಿವಿಧ ತಂತ್ರಗಳಿಂದ ಚಿನ್ನ ಕದಿಯುತ್ತಾನೆ, ಮೋಸ ಮಾಡುತ್ತಾನೆ, "ತ್ರಿಣಯನ ಮುಕುಟವಾದರೂ ಅಕ್ಕಸಾಲೆ ಟೊಣೆಯದೆ ಬಿಡನು" ಅದು ಹೋಗಲಿ, ಅಕ್ಕಸಾಲೆಯ ಮಗುವೂ ಸಹ "ಚಿಕ್ಕಟವು ಮೈಯ ಕಡಿವಂತೆ ಚಿಮ್ಮಟವನಿಕ್ಕುತಲೆ ಕಳುವ" ಎಂದು ವರ್ಣಿಸುವುದು ಅನುದಾರವಾಗಿದೆ. ಆ ವೃತ್ತಿಯಲ್ಲೂ ಪ್ರಾಮಾಣಿಕರು ಇರಬಹುದಲ್ಲವೆ? ಅಂಥ ಒಬ್ಬರೂ ಸರ್ವಜ್ಞನ ಕಣ್ಣಿಗೆ ಬೀಳಲಿಲ್ಲವೆ? ನಿಜ "ಅಕ್ಕನ ಚಿನ್ನವಾದರೂ ಅಕ್ಕಸಾಲಿ ಕದಿಯುತ್ತಾನೆ" ಎಂಬ ಗಾದೆ ಇದೆ. ಆದರೆ ಅದನ್ನು ಮಾಡಿದವರು ಯಾರು? ಜನಸಾಮಾನ್ಯರು. 'ಪಂಚಾಳನೆಲ್ಲಿರಲಿ ಕಳ್ಳ' ಎಂದು ಸಹ ಮತ್ತೆ ಬೇರೊಂದು ಶಬ್ದ (ಪಂಚಾಳ=ಅಕ್ಕಸಾಲೆ) ಉಪಯೋಗಿಸಿ ತೆಗಳಿದ್ದಾನೆ. ‘‘ಪಂಚಾಳರಯ್ಯರು ವಂಚನೆಗೆ ಗುರುವವರು" ಎಂಬಲ್ಲಿ ಐದು ಜನ ಪಂಚಾಯಿತಿಯವರು ಊರನ್ಯಾಯ ಹೇಳುವ ಪ್ರಮುಖರು ಎಂಬ ಅರ್ಥವಿರಬಹುದೇ?

ವ್ಯಾಪಾರಿ:

ಹರದ ಅಥವಾ ವ್ಯಾಪಾರಿಯನ್ನು ಕುರಿತು ಎರಡು ವಚನಗಳಿವೆ. "ಹರದನಿಗೆ ಪಟ್ಟಣದ ಆಶೆ", "ಹರದಂಗೆ ಇಟ್ಟೆಡೆಗಳಾಸೆ" ಎಂಬ ಹೇಳಿಕೆಗಳಿವೆ. ಗಳಿಸಿ, ಗಂಟು ಮಾಡಿಕೊಂಡು ಪಟ್ಟಣ ಸೇರುವ ಆಶೆ ವ್ಯಾಪಾರಿಗೆ ಎಂದು ಅರ್ಥವೆ? ವ್ಯಾಪಾರಿಗೆ ಕರೆದು ಎಡೆ ಇಡುತ್ತಿದ್ದರೆ? (ಎಡೆ = ಊಟ, ನೈವೇದ್ಯ). ಬಣಜಿಗ ಎಂದರೂ ವ್ಯಾಪಾರಿ ಅಥವಾ ಹರದ ಎಂದೆ ಅರ್ಥ. ಆ ಶಬ್ದವನ್ನು ಉಪಯೋಗಿಸಿ ಎರಡು ವಚನಗಳಲ್ಲಿ ಉಲ್ಲೇಖವಿದೆ.

'ಬಣಜಿಗನು ಗುಣವಂತನಲ್ಲ" ಎಂದಿದ್ದಾನೆ. ಯಾರ ಬಗ್ಗೆಯೂ, ಯಾವ ಕಸುಬುದಾರನ ಬಗ್ಗೆಯೂ ಹೀಗೆ ಬರೆದುಬಿಡಬಹುದು. ಅವರವರ ವೃತ್ತಿಯಲ್ಲಿ ನಿಷ್ಠೆ ಬೇಕೆಂಬುದು ಈ ವಚನದ ಮಥಿತಾರ್ಥವಿದ್ದೀತು.

ಮತ್ತೊಂದು ವಚನದಲ್ಲಿ ಗಾಣಿಗ, ಸಿಂಪಿಗ, ತಳವಾರ, ಬಣಜಿಗ ಇವರ ಬಗ್ಗೆ ತುಂಬ ಸಲೀಸಾಗಿ ತೋಚಿದ್ದು ಗೀಚಿದ್ದಾನೆ.

⊗ಎಳ್ಳು ಗಾಣಿಗ ಬಲ್ಲ, ಸುಳ್ಳು ಸಿಂಪಿಗ ಬಲ್ಲ

ಕಳ್ಳರನು ಬಲ್ಲ ತಳವಾರ, ಬಣಜಿಗನು
ಎಲ್ಲವನು ಬಲ್ಲ

ಇಲ್ಲಿ ಪ್ರಾಸವೇ ಪದ್ಯವನ್ನು ನಡೆಸುತ್ತಿದೆ, ಸದೃಢವಾದ ತರ್ಕ, ಚಿಂತನಾಂಶ ಇಲ್ಲಿ ಇಲ್ಲವೇ ಇಲ್ಲ. (⊗ ಎಲ್.ಬಸವರಾಜು ಅವರ ಸಂಗ್ರಹದ, ಹೆಚ್ಚಿನ ವಚನಗಳ ಗುಂಪಿನಲ್ಲೂ ಇದು ಸೇರ್ಪಡೆಯಾಗದೆ ಇರುವುದು ಇದು ಖಂಡಿತ ಪ್ರಕ್ಷಿಪ್ತವೆಂಬುದನ್ನು ದೃಢಪಡಿಸುತ್ತದೆ – ಗಮನಿಸಿ).

ಗಾಣಿಗನಿಗೆ ಎಳ್ಳಿನ ಸತ್ವ, ಗುಣಮಟ್ಟ ಮುಟ್ಟಿದರೆ ಗೊತ್ತಾಗುತ್ತದೆ ಎಂಬ ಅರ್ಥ ಸರಿ, ಸಿಂಪಿಗ ಅಥವಾ ದರ್ಜಿ ವಾಯಿದೆ ಹೇಳುತ್ತಾನೆ ಎಂಬ ಅರ್ಥದಲ್ಲಿ ಇಲ್ಲಿ ಸ್ವೀಕರಿಸಬೇಕು. ತಳವಾರ ಕಳ್ಳರನು ಬಲ್ಲ ಎಂದರೆ ಏನು ಅರ್ಥ, ಅವನ ವೃತ್ತಿಯೇ ಅದು, ಆದ್ದರಿಂದ ಅವನು ಕಳ್ಳರನ್ನು ಪತ್ತೆ ಹಚ್ಚುತ್ತಾನೆ. ಬಣಜಿಗನು ಎಲ್ಲ ಬಲ್ಲ ಎಂದರೆ ಏನರ್ಥ? ಏನೂ ಇಲ್ಲ! ಎಳ್ಳು, ಸುಳ್ಳು, ಕಳ್ಳತನ – ಎಂದು ಅರ್ಥವೇ? ಈ ರಚನೆಯೇ ಶುಷ್ಕ, ಅಪಕ್ವವಾಗಿದೆ. ಗಾಣಿಗನು ಯಾರಿಂದಲಾದರೂ ಕೆಲಸ ಮಾಡಿಸುತ್ತಾನೆ ಎಂಬ ಅಭಿಪ್ರಾಯ ಇಲ್ಲಿರುವಂತಿದೆ, ನೋಡಿ, ". . . . ಏಕಾಂಕಧರನು ಧರೆಗಿಳಿಯಲವನಿಂದ ಗಾಣವಾಡಿಸುವ ಸರ್ವಜ್ಞ"

ಕುಂಬಾರನನ್ನು ಕುರಿತು "ಕುಂಬಾರಲೇಸು ಊರಿಗೆ" ಎಂದು ಕೈತೊಳೆದುಕೊಂಡು ಬಿಟ್ಟ.

ಜಾಲಗಾರ ಅಥವಾ ಮೀಂಗುಲಿಗರನ್ನು ಕುರಿತ ವಚನ ಇದು:

ಸಾಲಿಗನು ಮೇಣಕ್ಕೆ ಸಾಲಿಯಲಿ ನಂಬಿಕೆಯು
ಜಾಲಗರನಲಿ ದಯೆ, ಧರ್ಮ, ಮುನ್ನಾವ
ಕಾಲಕ್ಕೂ ಇಲ್ಲ ಸರ್ವಜ್ಞ

ಜಾಲಗಾರನು ಬಲೆ ಒಡ್ಡಿ ಮೀನನ್ನು ಹಿಡಿಯಲೇ ಬೇಕು, ಅದು ವೃತ್ತಿ; ಅಲ್ಲಿ ದಯೆ ಧರ್ಮ ಎಲ್ಲಿ ಬಂತು?

ಗಾಜುಗಾರ: ಗಾಜಿನ ಪದಾರ್ಥಗಳನ್ನು ಮಾಡುವವನು 'ಗಾಜಿನ ಕುಣಿಕೆ ಮಣಿಯಲ್ಲ', 'ಗಾಜೊಂದು ಲೋಹವಲ್ಲ', 'ಹೂಜೆಭಾಂಡದೊಳಿಲ್ಲ" ಗಾಜು ಅಮೂಲ್ಯಮಣಿಗಳಂತಲ್ಲ; ಲೋಹದಂತೆ ಗಾಜಿನ ಪಾತ್ರೆ ಬಾಳಿಕೆ ಬರುವುದಿಲ್ಲ ಎನ್ನುವುದು ಅಭಿಪ್ರಾಯವಿರಬೇಕು.

ಜೇಡ (ನೇಕಾರ)

ಬೇಡಂಗೆ ಶುಚಿಯಿಲ್ಲ ಬೋಡಂಗೆ ರುಚಿಯಿಲ್ಲ
ಕೂಡಿಲ್ಲದಂಗೆ ಸುತರಿಲ್ಲ, ಜೇಡ ತಾ
ಮೂಡಾತ್ಮನಲ್ಲ ಸರ್ವಜ್ಞ

ಈ ವಚನದ ಶಿಲ್ಪದಲ್ಲಿ ತರ್ಕವಿಲ್ಲ, ಹೊಂದಾಣಿಕೆ ಇಲ್ಲ, ಬೇಡ, ಬೋಡ, ಕೂಡು, ಮೂಢ ಎಂಬ ಪ್ರಾಸಮೋಹವೇ ಮುಂದಾಗಿದೆ. 'ಜೇಡ ತಾ ಮೂಢನಲ್ಲ' ಎಂಬ ರಿಯಾಯಿತಿ ಅವನಿಗೆ ಮಾತ್ರ ಏಕೆ?

ಬೇಡ (ಬೇಟೆಗಾರ):

ಇವನ ವೃತ್ತಿ ಬೇಟೆ. ಇವನ ಬಗ್ಗೆ ಎಂಟು ವಚನಗಳನ್ನು ರಚಿಸಿದ್ದಾನೆ. ಮಾಂಸಾಹಾರಿ ಇರುವವರೆಗೆ ಬೇಡ, ಬೇಡನ ವೃತ್ತಿ ಇರುತ್ತದೆ. ಅವನನ್ನು ಹಿಂಸಕ, ಕೆಟ್ಟವನಲ್ಲಿ ಕೆಟ್ಟವ ಎಂದು ದೂರಿದರೆ ಏನು ಬಂತು ಲಾಭ?

"ಬೇಡಗಡವಿಯ ಚಿಂತೆ", "ಬೇಡನ ನಂಟು ನೆರಹೊಲ್ಲ", "ಬೇಡ ತಾನೆಲ್ಲಿರಲಿ ಹೊಲ್ಲ", "ಬೇಡನ ಕೆಳೆಯಿಂದ ಕೇಡುತಪ್ಪದು"   ಹೀಗೆ ಲೀಲಾಜಾಲವಾಗಿ ಅವನ ನಿಂದೆ ನಡೆದಿದೆ. ಬಹುಶಃ ಆತ ಬೇಟೆಯಾಡಿ ತಂದ ಪ್ರಾಣಿಗಳ ಕಳೇಬರವನ್ನು ತನ್ನ ಸುತ್ತ ಹರಡಿಕೊಳ್ಳುವುದರಿಂದ ಅವನ ಬಗ್ಗೆ ಈ ಅಸಹನೆ, ಅಸಹ್ಯ ಭಾವನೆ ಬಂದಿರಬಹುದು. "ಬೇಡ ಕಾಯದೆ ಕೆಟ್ಟ, ಜೇಡ ನೇಯದೇ ಕೆಟ್ಟ, ನೋಡದಲೆ ಕೆಟ್ಟ ಕೃಷಿಕನು ...."

ಬೆಸ್ತ (ಮೀನುಗಾರ, ಮೀಂಗುಲಿಗ, ಜಾಲಗಾರ):

ಜಾಲಗಾರನ ಪ್ರಸ್ತಾಪ ಮೊದಲೆ ಬಂದಿದೆ. ಸರ್ವಜ್ಞ ಬೆಸ್ತ ಎಂಬ ಶಬ್ದ ಬಳಸಿಲ್ಲ, ಸಂಪಾದಕರು ಕೊಟ್ಟ ಶೀರ್ಷಿಕೆ ಇದು.

ಕಿರಿಮೀನು ಹಿರಿಮೀನು ಕೊರೆಕೊರೆದು ತಿಂಬಾತ
ಗಿರುವವನೊಬ್ಬ ಮಗಸಾಯ ನೋವಿನ
ತೆರನ ತಾನರಿವ ಸರ್ವಜ್ಞ

ಮೀನು ತಿನ್ನುವವರಿರುವುದರಿಂದ ಬೆಸ್ತ ಮೀನು ಹಿಡಿದುತರುತ್ತಾನೆ, ತಾನೂ ತಿನ್ನುತ್ತಾನೆ, ತಿಂಬವರಿಗೆ ಮಾರುತ್ತಾನೆ. ಆದ್ದರಿಂದ ಇಲ್ಲಿ ಮೀಂಗುಲಿಗನನ್ನಲ್ಲ ಉದ್ದೇಶಿಸಿರುವುದು, ಮೀನನ್ನು ತಿನ್ನುವವರನ್ನು. ಸಸ್ಯಾಹಾರಿ ಮಾಂಸಾಹಾರಿಗಳ ಮಧ್ಯದ ಜಗಳ ಇದು.

ಕೊಂಡೆಯ:

ಕೊಂಡೆಯ ಎಂದರೆ ಚಾಡಿಕೋರ. ಪಿಸುಣ ಎಂಬುದು ನಿಘಂಟುವಿನ ಅರ್ಥ. 'ಕೊಂಡಯನೇ ಚೆಂದ ಅರಸಿಂಗೆ' ಎಂಬ ಸರ್ವಜ್ಞನ ಹೇಳಿಕೆಯನ್ನು ಗಮನಿಸಿದಾಗ ಗೂಢಚಾರಿ, ರಹಸ್ಯವನ್ನು ಭೇದಿಸಿತಂದು ರಾಜನಿಗೆ ತಿಳಿಸುವವನು, ವದಂತಿಗಳನ್ನು ಸಂಗ್ರಹಿಸಿ ತರುವವನು ಎಂದು ಅರ್ಥೈಸಬೇಕಾಗುತ್ತದೆ. "ಕೊಂಡೆಯನ ಗಾಳಿಯೇ ಹೊಲ್ಲ", "ಕೊಂಡೆಯರೊಳುತ್ತಮರು ಇಲ್ಲ", "ಕೊಂಡೆಯನ ಕಿಗ್ಗಳವೇ ಹೊಲ್ಲ" (ಹೀನತನ), "ಕೊಂಡೆಯನ ಸಹವಾಸ ಮಾಡಿದರೆ ವಿನಾಕಾರಣ ರಾಜಕಾರಣದಲ್ಲಿ ಸಿಲುಕಿಸಿಬಿಡಬಹುದು" ಎಂದು ದೂರಾನ್ವಯ ಮಾಡಬಹುದಾಗಿದೆ.

ಹೈನುಗಾರಿಕೆ: ಒಂದು ವಚನ ಇದಕ್ಕೆ ಸಂಬಂಧಿಸಿದೆ. ಗೊಲ್ಲರು ಅಥವಾ ಯಾದವರು ಹೈನುಗಾರಿಕೆಯನ್ನು ವೃತ್ತಿಯಾಗಿ ಉಳ್ಳವರು. ಒಕ್ಕಲಿಗ ಅಥವಾ ಕೃಷಿಕನು ಇದನ್ನು ಉಪವೃತ್ತಿಯಾಗಿ ಸ್ವೀಕರಿಸಬಹುದು.

ತುರುಕರುವು ಇರದೂರು ನರಕಭಾಜನಮಕ್ಕು
ತುರುಕರುಂಟಾದರುಣಲುಂಟು, ಜಗಕೆಲ್ಲ
ತುರುಕರುವೆ ದೈವ ಸರ್ವಜ್ಞ

ಹೈನುಗಾರಿಕೆ ಇಲ್ಲದಿದ್ದರೆ ಹಾಲು, ಮೊಸರು, ಬೆಣ್ಣೆ, ತುಪ್ಪ, ಸಗಣಿ, ಗೊಬ್ಬರ, ಬೆರಣಿ ಎಲ್ಲವೂ ನಾಸ್ತಿ. ಆದ್ದರಿಂದ ತುರುಕರು ಲೋಕಕ್ಕೆ ದೈವ.

ರಸವಾದಿ: ಅವಲೋಹಗಳಿಂದ ಚಿನ್ನವನ್ನು ಮಾಡುವವನು ರಸವಾದಿ. ಈ ಒಂದು ನಂಬಿಕೆ, ವೃತ್ತಿ ಇತಿಹಾಸ ಯುಗದಲ್ಲಿ ಇತ್ತು. ಅದು ಅವೈಜ್ಞಾನಿಕ, ಅತಾರ್ಕಿಕ. ಆದರೂ ಅದರ ಬಗ್ಗೆ ದಂತಕಥೆಗಳ ರಾಶಿಯೇ ಇದೆ. ಈ 'ವಿದ್ಯೆ'ಯ ಬಗ್ಗೆ ಒಂದು ಹತ್ತು ವಚನಗಳಿವೆ. ಅದು ಅಂದಿನ ಸಮಾಜದ ನಂಬಿಕೆ, ಆಚರಣೆಯಾಗಿತ್ತು.

'ವಸುಭಟ' ಎಂಬ ಗಿಡದ ಎಲೆ, ಅದು ಮೊಲದ ಕಿವಿಯಂತಿದೆ. ಅದರಿಂದಲೂ ತಾಳಕ, ಗಂಧಕದ ತೈಲ, ಕಪ್ಪಲಿ ಮೊದಲಾದ ಪದಾರ್ಥಗಳನ್ನು ಸೇರಿಸಿ ಚಿನ್ನ ತಯಾರಿಸಬಹುದು ಎಂಬುದು ಇಲ್ಲಿ ಉಕ್ತವಾಗಿದೆ. ಅ ಮೂಲವಸ್ತುಗಳು ಅಲಭ್ಯ ಅಥವಾ ಬರೀ ಕೃತಕ ಹೆಸರುಗಳು. ಇದು ಆ ಯುಗದ ಮೂಢನಂಬಿಕೆಯ ಭಾಗವಾಗಿ ಬಂದಿದೆ.

ವೈದ್ಯ: ಇಲ್ಲಿ ಸರ್ವಜ್ಞ ವೈದ್ಯರ ಬಗ್ಗೆ ತಿಳಿಸುವುದಿಲ್ಲ. ವೈದ್ಯದ ಬಗ್ಗೆಯೂ ತಿಳಿಸುವುದಿಲ್ಲ. ಆಯುರ್ವೇದದ ಶ್ರೀಮಂತ ಪರಂಪರೆ ಇರುವ ಈ ನಾಡಿನಲ್ಲಿ ಸರ್ವಜ್ಞನ . . . . ., ತೊದಲು ಮಾತುಗಳು ಹಾಸ್ಯಾಸ್ಪದವಾಗಿ ಕಂಡರೆ ಆಶ್ಚರ್ಯವಿಲ್ಲ.

ಕೆಲವು ಸರಳವಾದ ಔಷಧಿಗಳನ್ನು ತಿಳಿಸಿ 'ವೈದ್ಯನ ಗಸಣಿಯೇ ಬೇಡ', 'ವೈದ್ಯನ ಭಂಡಾರ ಬೇಡ' ಎನ್ನುತ್ತಾನೆ (ಈ ವಚನಗಳನ್ನು ಸರ್ವಜ್ಞಕೃತವೆಂದು ಎಲ್.ಬಸವರಾಜು ಅವರು ಸ್ವೀಕರಿಸಿದ್ದಾರೆ).

ಸರ್ವಜ್ಞನ ಈ ಧೋರಣೆ ಅವೈಜ್ಞಾನಿಕವಾಗಿದೆ, ಮೌಢ್ಯದಿಂದ ಕೂಡಿದೆ ಎನ್ನದೆ ವಿಧಿಯಿಲ್ಲ.

ಹಸಿವಿಲ್ಲದುಣಬೇಡ ಹಸಿದು ಮತ್ತಿರಬೇಡ
ಬಿಸಿಬೇಡ ತಂಗುಳವು ಬೇಡ ವೈದ್ಯನ
ಗಸಣಿಯೇ ಬೇಡ ಸರ್ವಜ್ಞ

ಮೊದಲೆರಡು ಪದಗಳಲ್ಲಿರುವ ಸೂಚನೆ ಸಾಧುವಾಗಿದೆ, ಅದರಲ್ಲಿ ವಿಶೇಷವೇನಿಲ್ಲ. ಆದರೆ ಅದನ್ನು ಪಾಲಿಸಿದರೆ ಎಲ್ಲಾ ರೋಗಗಳು ಪರಿಹಾರವಾಗುವುದಿಲ್ಲ. ಆದ್ದರಿಂದ ವೈದ್ಯರ ಗಸಣಿಯೇ ಬೇಡ ಎಂಬುದು ಉದ್ಧಟತನದ ಮಾತಾಗುತ್ತದೆ.

ಉಂಡು ಕೆಂಡವ ಕಾಯಿ ಉಂಡು ನಡೆಶತಪದವ
ಉಂಡು ಎಡದ ಮಗ್ಗುಲೊಳಾಗಿರುವ ವೈದ್ಯನ
ಭಂಡಾಟಬೇಡ ಸರ್ವಜ್ಞ

ಮೊದಲ ವಚನದ ಬಗ್ಗೆ ಮಾಡಿದ ಟೀಕೆಯನ್ನೇ ಇದಕ್ಕೂ ಅನ್ವಯಿಸಿಕೊಳ್ಳಬೇಕು. ಇನ್ನು ಕೆಮ್ಮಿಗೆ ಪರಿಹಾರವೆಂದು ಅವನು ಕೊಟ್ಟಿರುವ ಔಷಧಿಗಳನ್ನು "ನಂಬುವಂತಿಲ್ಲ, ಪ್ರಯೋಗಿಸಬೇಡಿ" ಎಂದು ಸಂಪಾದಕರು ಎಚ್ಚರಿಕೆ ಕೊಟ್ಟಿದ್ದಾರೆ.

ವಶ್ಯವಿದ್ಯೆಯ ಬಗ್ಗೆ ಸರ್ವಜ್ಞನ ಎರಡು ವಚನಗಳಾಗಲೀ, ಸೀನಿನ ಶಕುನದ ಬಗ್ಗೆ ಅವನು ಬರೆದಿರುವುದಾಗಲೀ ಅವನ ಸಹಜ ಧೋರಣೆಗೆ, ಮನೋಧರ್ಮಕ್ಕೆ ಅನುಗುಣವಾಗಿಲ್ಲ. ಮೌಢ್ಯ, ಅಂಧಶ್ರದ್ಧೆಯನ್ನು ಹರಡುವ ಪ್ರತಿಗಾಮಿ ವಿಚಾರಗಳಾಗಿವೆ.

"ಸೀತರೊಂದಡಿಯಿಡಬೇಡ"

"ನಾಯಿ, ಕತ್ತೆ, ಕಪಿ, ಪಶು ಅಥವಾ ನಾವೇ ಆಗಲಿ ಸೀತರೆ ಪ್ರಯಾಣಕ್ಕೆ ಭಯ"

"ಒಮ್ಮೆ ಸೀತರೆ ಹೊಲ್ಲ, ಇಮ್ಮೆ ಸೀತರೆ ಲೇಸು
ಕೆಮ್ಮಿ ಕೇಕರಿಸಿ ಉಗಿದರೆ ಆ ಲೇಸ
ಬ್ರಹ್ಮ ಪಡೆದಪನೆ ಸರ್ವಜ್ಞ

ಈ ಸೀನಿನ ಪುರಾಣ ಯಾರಿಗೆ ಬೇಕು? ಸರ್ವಜ್ಞನಂಥ ವಿಚಾರವಾದಿ, ಸತ್ಯಪ್ರಿಯ, ವಾಸ್ತವವಾದಿ ಹೀಗೂ ನುಡಿಯಬಹುದೆ? ಇದು ಪ್ರಕ್ಷಿಪ್ತವಾಗಿರಬಹುದೇ?

ಅನ್ನದ ಮಹಿಮೆ ಅಥವಾ ಸತ್ತ್ವದ ಬಗ್ಗೆ ಬರೆಯುತ್ತಾ ಈ ವಾಸ್ತವವಾದಿ,

ಅಡಿಗಳು ಏಳವು ನುಡಿಗಳು ತೋಚವು
ಮಡದಿಯರು ಮನಕೆ ಸೊಗಸರು ಕೂಳೊಂದು
ಘಳಿಗೆ ತಪ್ಪಿದರೆ ಸರ್ವಜ್ಞ

ಇಲ್ಲಿ ಸರ್ವಜ್ಞತನವಿದೆ, ಸರ್ವಜ್ಞನ ಮುದ್ರೆ ಬಿದ್ದಿದೆ, ಎಲ್ಲಾ ಕಾಲಕ್ಕೂ ಸಲ್ಲುವ ಸತ್ಯ, ಗೆಲ್ಲುವ ಸತ್ಯ ಇಲ್ಲಿದೆ.

ಜ್ಯೋತಿಷ್ಯ:

ಜ್ಯೋತಿಷ್ಯ ಒಂದು ಶಾಸ್ತ್ರ. ಅದನ್ನು ತಿಳಿದವನು ಜ್ಯೋತಿಷಿ. ಈ ಶಾಸ್ತ್ರ ಅತಿ ಪ್ರಾಚೀನ. ಇದು ವೇದದ ಷಡಂಗಗಳಲ್ಲಿ ಒಂದು. ಗ್ರಹ ನಕ್ಷತ್ರಗಳನ್ನು ಆಧರಿಸಿ ವಿವರಿಸಲಾದ ಶಾಸ್ತ್ರ. ಅದನ್ನು ಅನುಸರಿಸಿ ಕರಣ, ಯೋಗ, ಗ್ರಹಣ, ಮಳೆಯ ಲಕ್ಷಣ ಇವುಗಳನ್ನು ಸಂಗ್ರಹವಾಗಿ ನಿರೂಪಿಸಿದ್ದಾನೆ. ಇದರಿಂದ ಸರ್ವಜ್ಞನಿಗೆ ಆ ಶಾಸ್ತ್ರದ ಪರಿಚಯವಿತ್ತು ಎಂದು ತಿಳಿಯಬಹುದಾಗಿದೆ. ಹತ್ತಾರು ವಚನಗಳಲ್ಲಿ ರಾಶಿಫಲವನ್ನು ತಿಳಿಸಿದ್ದಾನೆ.

ಈ ಬಗ್ಗೆ ಅವನ ಸ್ವಂತ ವಿಚಾರಗಳು ಕ್ರಾಂತಿಕಾರಕವಾಗಿವೆ.

ತಂತ್ರ ತಾಂಬೂಲದಲಿ, ಮಂತ್ರಗಾರುಡಿಯಲ್ಲಿ
ಯಂತ್ರ ಜೋಯಿಸನ ಗ್ರಹಣದಲಿ ಇವು ಮೂರು
ಎಂತು ಹುಸಿಯೆಂದ ಸರ್ವಜ್ಞ

ಹಸಿದಿಹರೆ ಉಣಲಿಲ್ಲ ಒಸದೇಳ ಹೊತ್ತಿಲ್ಲ
ಬೆಸಗೊಂಬುವುದಕೆ ಗಡಿಯಿಲ್ಲ ಜೋಯಿಸರ
ಘಸಣೆಯೋ ಸಲ್ಲ ಸರ್ವಜ್ಞ (ಘಸಣೆ = ತಿಕ್ಕಾಟ, ಘರ್ಷಣೆ)

ಹೀಗೆ ಸಮಾಜದ ವಿವಿಧ ವೃತ್ತಿಗಳ ಬಗ್ಗೆ, ಅವುಗಳ ಪ್ರಯೋಜನಗಳ ಬಗ್ಗೆ ಸರ್ವಜ್ಞನ ವಿಚಾರಗಳು ಸಮಗ್ರವಾಗಿ, ತರ್ಕಸಮ್ಮತವಾಗಿ, ಪರಿಭಾವನೆಯ ಫಲವಾಗಿ, ದೋಷರಹಿತವಾಗಿ, ಪಕ್ಷಪಾತರಹಿತವಾಗಿ ಇಲ್ಲಿ ದಾಖಲಾಗಿಲ್ಲ. ಅವು ಅಪೂರ್ಣವಾಗಿವೆ, ಯಾವುದೋ ಒಂದು ಅಂಶವನ್ನು, ಒಂದು ದೋಷವನ್ನು ದೊಡ್ಡದು ಮಾಡಿ ಬಿಂಬಿಸಲಾಗಿದೆ. ಬಹಳಷ್ಟು ಸಲ ಅವು ಲಹರಿಯ, ಕೇವಲ ಅಭಿಪ್ರಾಯದ ಮಾತಾಗಿಬಿಟ್ಟಿದೆ. ಇದಕ್ಕೆ ಅಪವಾದವೆಂದರೆ ಅವನ ಸುಪ್ರಸಿದ್ಧ ವಚನ : "ಕೋಟಿವಿದ್ಯೆಗಳಲಿ . . .. . ." ಅಲ್ಲಿ ಕಾಣುವ ತರ್ಕಬದ್ಧತೆ, ಸಮಗ್ರತೆ, ಸಾರ್ವಕಾಲಿಕ, ಸಾರ್ವದೇಶಿಕ ಸತ್ಯ ಮಿಕ್ಕ ವೃತ್ತಿಗಳ ಬಗ್ಗೆ, ವೃತ್ತಿನಿಷ್ಠರ ಬಗ್ಗೆ ರಚಿಸಿದ ವಚನಗಳಲ್ಲಿ ಕಾಣುವುದಿಲ್ಲ. ಬಹುಶಃ ಆಯಾವೃತ್ತಿಗಳ ಬಗ್ಗೆ ಲೋಕಾಭಿರಾಮವಾಗಿ, ಕ್ಷಣಕ್ಕೆ ಅನ್ನಿಸಿದ್ದನ್ನು ವಚನಮುಖೇನ ದಾಖಲಿಸಿರಬಹುದು.

### ೩.೬ ದಾನದ ಮಹತ್ತ್ವ ಕುರಿತು ಸರ್ವಜ್ಞನ ವಿಚಾರಗಳು

ಸರ್ವಜ್ಞನ ಹತ್ತಾರು ವಚನಗಳಲ್ಲಿ ದಾನದ ಪ್ರಸ್ತಾಪ ಬಂದಿದೆ. ಅದರ ಮಹತ್ತ್ವವನ್ನು, ಪ್ರಯೋಜನವನ್ನು ಮತ್ತೆ ಮತ್ತೆ ಬೇಸರಿಸದೆ ನಿರೂಪಿಸಿದ್ದಾನೆ. ಭಾರತೀಯ ಪರಂಪರೆಯಲ್ಲಿ ದಾನ ಒಂದು ಮೌಲ್ಯವಾಗಿ ಪುರಸ್ಕೃತವಾಗಿದೆ. ದಾನ ಎಂದರೆ ಬೇಡದೇ ಬಂದದ್ದು, ಭಿಕ್ಷೆ ಬೇಡಿ ಪಡೆದದ್ದು.

ಬ್ರಾಹ್ಮಣನ ಷಟ್ಕರ್ಮಗಳಲ್ಲಿ ದಾನ ಒಂದು (ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪರಿಗ್ರಹಗಳು ಷಟ್ಕರ್ಮಗಳು). ದಾನಗಳಲ್ಲಿ ವೈವಿಧ್ಯವುಂಟು. ಅನ್ನದಾನ, ವಸ್ತ್ರದಾನ, ಹಿರಣ್ಯದಾನ (ಬಂಗಾರ), ಗೋದಾನ, ದ್ರವ್ಯದಾನ, ವಿದ್ಯಾದಾನ, ಕನ್ಯಾದಾನ, ಭೂದಾನ (ಇಲ್ಲದವರಿಗೆ ಭೂಮಿ ಕೊಡಿಸುವುದು ವಿನೋಬಾ ಅವರ ಬದುಕಿನ ಸಂದೇಶವಾಗಿತ್ತು). ಮಹಾಭಾರತದ ಅನುಶಾಸನಪರ್ವದಲ್ಲಿ ಭೀಷ್ಮನು ಯುಧಿಷ್ಠಿರನಿಗೆ ದಾನಧರ್ಮದ ಸ್ವರೂಪವನ್ನು ಕುರಿತು ಸುದೀರ್ಘವಾಗಿ ಬೋಧಿಸುತ್ತಾನೆ.

ದಾನವನ್ನು ಎಲ್ಲರೂ ಸದ್ಭಾವದಿಂದ, ಸದುದ್ದೇಶದಿಂದ ಮಾಡುವುದಿಲ್ಲ. ಆರುಣಿ (ಉದ್ದಾಲಕ) ಎಂಬ ಮುನಿ ಯಜ್ಞಾಂತ್ಯದಲ್ಲಿ ಮುದಿ ಎತ್ತುಗಳನ್ನು ಬ್ರಾಹ್ಮಣರಿಗೆ ದಾನ ಮಾಡುತ್ತಿದ್ದನಂತೆ. ಇದನ್ನು ಕಂಡ ಅವನ

ಮಗ ನಚಿಕೇತ ಬೇಸರಿಸಿ, ತನ್ನ ತಂದೆಯನ್ನು ಕುರಿತು ನನ್ನನ್ನು ಯಾರಿಗೆ ದಾನ ಮಾಡುತ್ತೀಯೆ ಎಂದು ಕೇಳಿದ. ಕುಪಿತನಾದ ತಂದೆ 'ಯಮ'ನಿಗೆ ಎಂದ. ನಚಿಕೇತ ನೇರ ಯಮಾಲಯಕ್ಕೆ ತೆರಳಿ, ಯಮನ ಸೇವೆ ಮಾಡಿ ಅವನಿಂದ ಜ್ಞಾನ ಸಂಪಾದಿಸಿದನಂತೆ. ಪ್ರಹ್ಲಾದ ಮೊಮ್ಮಗನಾದ ಬಲಿ ಚಕ್ರವರ್ತಿ ಅಶ್ವಮೇಧ ಯಾಗ ಮಾಡಿ ಅಂತ್ಯದಲ್ಲಿ ದಾನ ಮಾಡುತ್ತಿದ್ದಾಗ, ಬಲಿ ಚಕ್ರವರ್ತಿಯಲ್ಲಿ ಮೂರಡಿ ನೆಲವನ್ನು ಬೇಡಿ ಹರಿ ವಾಮನಾವತಾರದಲ್ಲಿ ಬಲಿಯನ್ನು ತುಳಿದ ಕಥೆ ಪ್ರಸಿದ್ಧ. ಉಶೀನರಾಜನ ಮಗನಾದ ಶಿಬಿ ಚಕ್ರವರ್ತಿ ಒಂದು ಪಾರಿವಾಳವನ್ನು ಕಾಪಾಡಲು ಹದ್ದಿಗೆ ತನ್ನ ತೊಡೆಯ ಮಾಂಸವನ್ನೇ ಕತ್ತರಿಸಿಕೊಟ್ಟ ಪ್ರಸಂಗವಿದೆ. ದಾನಶೂರ ಕರ್ಣನ ಔದಾರ್ಯವಂತೂ, ದಾನಗಳಂತೂ ಮನೆ ಮಾತಾಗಿದೆ. ಇತಿಹಾಸಯುಗದಲ್ಲಿ, ಕನ್ನಡನಾಡಿನಲ್ಲಿ ಪ್ರಸಿದ್ಧಳಾದ ದಾನಚಿಂತಾಮಣಿ ಅತ್ತಿಮಬ್ಬೆಯ ಗುಣವನ್ನು ರನ್ನಕವಿ ಕೊಂಡಾಡಿದ್ದಾನೆ. ಬಸವಾದಿಶರಣರು ದಾನಕ್ಕೆ ಕೊಟ್ಟ ಮಹತ್ತ್ವ ಪ್ರಸಿದ್ಧವೇ ಇದೆ. ಬಸವನ ಮಹಾಮನೆಯಲ್ಲಿ ನಿತ್ಯದಾಸೋಹ. . . . . ಈ ಹಿನ್ನೆಲೆಯಲ್ಲಿ ಸರ್ವಜ್ಞನು ದಾನದ ಬಗ್ಗೆ ನುಡಿದಿರುವ ಮಾತುಗಳನ್ನು ಗ್ರಹಿಸಲು ಯತ್ನಿಸಬಹುದು.

ಸರ್ವಜ್ಞನ ಈ ವಚನ ನೋಡಿ:

ಈವಂಗೆ ದೇವಂಗೆ ಆವುದಂತರವಯ್ಯಾ
ದೇವನು ಜಗಕೆ ಕೊಡುವನು, ಕೈಯಾರೆ
ಈವನೇದೇವ ಸರ್ವಜ್ಞ

"ದಾನಿಗೂ ದೇವನಿಗೂ ಭೇದವಿಲ್ಲ, ಕೈಯಾರೆ, ಮನಸಾರೆ ದಾನ ಮಾಡುವವನೇ ದೇವನು" ಎಂದು ಕಂಠೋಕ್ತವಾಗಿ ಸಾರಿದ್ದಾನೆ.

ಪರಉಪಕಾರಗಳನುರೆಮಾಳ್ಪ ಮಾನವನೇ
ಪರಶಿವಕಳುಹಲವ ಬಂದು ಧರೆಯೊಳಗೆ
ಮೆರಗುತ್ತಮಿರ್ಕು ಸರ್ವಜ್ಞ

ಪರೋಪಕಾರಿ ಮಾನವನಲ್ಲ; ಪರಶಿವನ ಪ್ರತಿನಿಧಿ, ಅವನ ಆಜ್ಞೆಯಂತೆ ಬಂದು ಇಲ್ಲಿ ಕಳಕಳಿಸುತ್ತಿದ್ದಾನೆ.

ಕೊಟ್ಟದ್ದು ತನಗೆ ಬಯಚಿಟ್ಟುದು ಪರರಿಗೆ
ಕೊಟ್ಟುದು ಕೆಟ್ಟಿತೆನಬೇಡವದು ಮುಂದೆ
ಕಟ್ಟಿದ ಬುತ್ತಿ ಸರ್ವಜ್ಞ

ದಾನ ಕೊಟ್ಟದ್ದು ತನಗೆ ಮತ್ತೆ ದಕ್ಕುತ್ತದೆ, ಮುಚ್ಚಿ ಇಟ್ಟದ್ದು (ದ್ರವ್ಯ) ಪರರ ಪಾಲಾಗುತ್ತದೆ ದಾನ ಮಾಡಿದ್ದು (ಸಾವಿನ ನಂತರ). ಮುಂದಿನ ಜೀವನ ಯಾತ್ರೆಯಲ್ಲಿ ಅದು ಪುಣ್ಯದ ಬುತ್ತಿಯಾಗಿ ಉಳಿದಿದೆ ಎಂದು ಸಾರಾಂಶ.

ಆತ್ಮಸಂತೋಷಕ್ಕಾಗಿ ದಾನ, ಫಲಾಪೇಕ್ಷೆಯಿಲ್ಲದ ದಾನ - ಎಂಬುದೆಲ್ಲ ಬರೀ ಆದರ್ಶವಾದೀತು! ಆದ್ದರಿಂದ ಸರ್ವಜ್ಞ ದಾನ ಮಾಡಿದರೆ ದೊರೆಯುವ ಲೌಕಿಕ, ಆಮುಷ್ಮಿಕ ಫಲಗಳನ್ನು ತೋರಿಸುತ್ತಾನೆ.

ಮರಣ ಅನಿವಾರ್ಯ, ತನಗೆಂದು ಸಂಗ್ರಹಿಸಿಟ್ಟರೆ ಅದು ಪರರ ಪಾಲು, ಆದ್ದರಿಂದ ಬದುಕಿದ್ದಾಗಲೇ ದಾನ ಮಾಡು.

ದಾನದ ಫಲದಿಂದ, ಪರಲೋಕದಲ್ಲಿ ಇಂದ್ರ ಪದವಿ, ವಿಷ್ಣು ಪದವಿ ದೊರೆಯುತ್ತದೆ. ಕೆಲವರು ಲೋಭಿಗಳಿರುತ್ತಾರೆ, ಜಾಣತನದಿಂದ ಮಾತನಾಡುತ್ತಾರೆ. ಇದ್ದರಲ್ಲವೇ ಕೊಡುವುದು, ಬಂದಾಗ ಸಿರಿ ಕೊಡೋಣವಂತೆ ಎನ್ನುತ್ತಾರೆ. ಅದಕ್ಕೆ ಸರ್ವಜ್ಞ ಉತ್ತರ 'ಕಾಣಿ ಗಳಿಸಿದರೆ ಅರ್ಧ ಕಾಣಿ ಕೊಡು' (ಕಾಣಿ = ಚಿಕ್ಕಾಸು). ಗಳಿಸಿ ಸಂಗ್ರಹಿಸಿಕೊಡುತ್ತೇನೆ ಎಂದುಕೊಳ್ಳಲು ನಿನ್ನ "ಪ್ರಾಣ ಶಾಶ್ವತವೇ ಸರ್ವಜ್ಞ" ಎಂದು ಮರು ಸವಾಲು ಅವನದು. ಆನೆಯನೇರಬೇಕು, ಸ್ವರ್ಗವಾಸ ಮಾಡಬೇಕು ಎಂಬ ಆಶೆಯಿದ್ದರೆ "ಹಸಿದರ್ಗೆ ನೀನೊಲಿದಿಕ್ಕು ಸರ್ವಜ್ಞ" ಹಸಿದಿರುವ ದೀನದಲಿತರಿಗೆ ಪ್ರೀತಿಯಿಂದ ಅನ್ನದಾನ ಮಾಡು ಎಂದು ಸೂಚಿಸುತ್ತಾನೆ. ಮತ್ತೆ ಕೆಲವರು ಆನೆ ಬೇಡ, ಸ್ವರ್ಗ ಬೇಡ, 'ಅಂಗನೆಯರು ಬೇಕು' ಎನ್ನುವುದಾದರೆ, ಅದಕ್ಕೂ ಹಸಿದವರಿಗೆ ಅನ್ನದಾನ ಮಾಡುವುದೇ ಉಪಾಯ. ಮತ್ತೆ ಕೆಲವು ಜಿಪುಣರು ದಾನ ಮಾಡಲು ಒಲ್ಲದೆ, ನಮಗೆ ಭೋಗ ಬೇಡ, ಹೆಣ್ಣು ಬೇಡ, "ಪಶುಪತಿಯ ಪದವೇ ಲಕ್ಷ್ಯ" ಎನ್ನುತ್ತಾರೆ. ಅದನ್ನು ಸಾಧಿಸಲು ಸಹ "ಹಸಿದವರಿಗೆ ಅಶನವನ್ನಿಕ್ಕಬೇಕು" ಎಂದು ಆದೇಶ. ಅನ್ನದಾನದಿಂದ ಕುಲ, ಸಂಪತ್ತು, ಪದವಿ ದೊರೆಯುತ್ತದೆ ಎಂದು ಮತ್ತೆ ಮತ್ತೆ ಒತ್ತಿ ಹೇಳುತ್ತಿದ್ದಾನೆ. ಕೊಡಲು ಇಲ್ಲ ಎಂಬ ನೆಪ ಬೇಡ. "ಭಿಕ್ಷವ ತಂದಾದೊಡಂ ಭಿಕ್ಷವಿಕ್ಕುಣಬೇಕು" ಎಂಬುದು ನೇಮವಾಗಬೇಕು.

ಅನ್ನವನು ಇಕ್ಕುವುದು ನನ್ನಿಯನು ನುಡಿಯುವುದು
ತನ್ನಂತೆ ಪರರ ಬಗೆದಡೆ ಕೈಲಾಸ
ಬಿನ್ನಾಣವಕ್ಕು ಸರ್ವಜ್ಞ

ಪರಮಪದವಿಗೆ ಸಾಧಕವಾದ ಮೂರು ಕರ್ಮಗಳೆಂದರೆ, ಅನ್ನದಾನ, ಸತ್ಯವಚನ, ತಾನು-ನೀನು ಎಂಬಲ್ಲಿ ಅಭೇದ, ಅಷ್ಟೇ ಸಾಕು. ಕೆಲವರು ದಾನ ಮಾಡುತ್ತಾರೆ, ಚೌಕಾಸಿ ಮಾಡಿ, ಅಳೆದು, ಸುರಿದು, ಕಾಡಿಸಿ, ಬೇಡಿಸಿ ಕೊನೆಗೆ ದಾನ ಮಾಡುತ್ತಾರೆ ಹಾಗೆ ಮಾಡದೆ ತ್ವರಿತದಲ್ಲಿ ದಾನ ಕೊಡಬೇಕು. ಕೊಟ್ಟು ಆಡಿಕೊಳ್ಳಬಾರದು. ಮತ್ತು ಅಗತ್ಯವನ್ನು ಅರಿತು ದಾನ ಮಾಡಬೇಕು. ಅತಿಯಾದ ದಾನ ತೆಗೆದುಕೊಂಡವನಿಗೆ ಆಪತ್ತಾಗಿ ಪರಿಣಮಿಸಿದರೆ!

ಆಗ ಬಾ ಈಗ ಬಾ ಹೋಗಿ ಬಾ ಎನ್ನದೆ
ಆಗಲೇ ಕರೆದುಕೊಡುವವನ ಧರ್ಮ ಹೊ
ನ್ನಾಗದೇ ಬಿಡದು ಸರ್ವಜ್ಞ

ಆಡದೆ ಕೊಡುವವನು ರೂಢಿಯೊಳಗುತ್ತಮನು
ಆಡಿ ಕೊಡುವವನು ಮಧ್ಯಮನಧಮ ತಾ
ನಾಡಿಕೊಡದವನು ಸರ್ವಜ್ಞ

ಪ್ರಚಾರ ಮಾಡದೆ, ಮೌನವಾಗಿ, ಕಾಡದೆ – ತಕ್ಷಣ ಕೊಡುವವನು ಉತ್ತಮದಾನಿ. ಕೆಲವು ಪ್ರಚಾರಪ್ರಿಯರಿರುತ್ತಾರೆ. ಅವರು ಲೋಕಕ್ಕೆಲ್ಲಾ ಸಾರಿ ಹೇಳಿ ದಾನಕೊಟ್ಟು ಬೀಗುತ್ತಾರೆ. ಇಂಥ ದಾನಿ ಮಧ್ಯಮ. ಮತ್ತು ಕೆಲವರಿರುತ್ತಾರೆ, ಅತಿಯಾದ ಪ್ರಚಾರ ಮಾಡುತ್ತಾರೆ. ಇವರಿಗೆ ಸಿಕ್ಕಿದ್ದು ಬಿಟ್ಟಿ ಪ್ರಚಾರ, ಪುಣ್ಯವಲ್ಲ; ಅರ್ಥಿಗೂ ದಾನವಲ್ಲ ಸಿಕ್ಕಿದ್ದು, ಪ್ರಯಾಸ. ಇಂಥವರು ಮಹಾನೀಚರು, ಅಧಮರು.

ದಾನ ಎಷ್ಟು ಕೊಡಬೇಕು? ಅರ್ಥಿಯ ಕನಿಷ್ಠ ಅಗತ್ಯವನ್ನು ಪೂರೈಸುವಷ್ಟು ಮಾತ್ರ. ಕೆಲವು ದಾನಿಗಳಿರುತ್ತಾರೆ, ತುಂಬ ಉದಾರಿಗಳು, ಬೇಡಿದ್ದಕ್ಕೆ ಸಾವಿರ ಪಟ್ಟು ಕೊಟ್ಟು ಬೀಗುತ್ತಾರೆ, ಪರಿಣಾಮ, ವಿಪರೀತ (ವಿರುದ್ಧ).

ಸೊಡರೆಣ್ಣೆ ತೀರಿದರೆ ಕೊಡನೆತ್ತಿ ಸುರಿದಿಹರೆ?
ಕೊಡಬೇಡ, ಕೊಡದೆ ಇರಬೇಡ, ದಾನವನು
ಬಿಡಬೇಡವೆಂದ ಸರ್ವಜ್ಞ

ಸೊಡರಿನ ಎಣ್ಣೆ ತೀರಿದರೆ, ಮಿಳ್ಳೆಯಲಿ ಹನಿಸಬೇಕು, ಬತ್ತಿ ನೆನೆಯುವಷ್ಟು ತೈಲ. ನಮ್ಮಲ್ಲಿ ಇದೆ ಎಂಬ ಕಾರಣಕ್ಕೆ ಕೊಡದಷ್ಟು ಎಣ್ಣೆ ಸುರಿದರೂ ತಟ್ಟನೆ ದೀಪ ಆರಿಹೋಗುತ್ತದೆ. ಎಣ್ಣೆಯೆಲ್ಲ ನೆಲಕ್ಕೆ ಬಿದ್ದು ಓಡಾಡುವವರು ಜಾರಿ ಬೀಳುವಂತಾಗುತ್ತದೆ. ಅರ್ಥಿಯ ಅಗತ್ಯ ಹತ್ತು ರೂಪಾಯಿ, ದಾನಿ ನೂರು ಕೊಟ್ಟರೆ, ಸಾವಿರ ಕೊಟ್ಟರೆ, ಲಕ್ಷ ಕೊಟ್ಟರೆ? ಅನರ್ಥವೇ ಹೆಚ್ಚು. ಅವನ ಮೂಲಭೂತ ಅಗತ್ಯಗಳು ತೀರಿದ ಬಳಿಕ, ಹಣವೇ ದುಶ್ಚಟಕ್ಕೆ ದಾರಿಯಾಗುತ್ತದೆ, ಆರೋಗ್ಯ ಕೆಡುತ್ತದೆ, ಪರನಾರಿ ಸಹವಾಸದಿಂದ ಅವನ ಸಂಸಾರದ ನೆಮ್ಮದಿ ಕೆಡುತ್ತದೆ. ಜೂಜಾಟದಿಂದ, ಪಂದ್ಯದಿಂದ ಹಣ ವ್ಯಯವಾಗುತ್ತದೆ. ಮತ್ತೆ ಇದ್ದ ಸ್ಥಿತಿಗೆ ಬಂದು ತಲುಪುತ್ತಾನೆ. ಆದ್ದರಿಂದ ಔದಾರ್ಯಕ್ಕೂ ಔಚಿತ್ಯವೇ ಆಧಾರವಾಗಬೇಕು. ಕಾಲೋಚಿತವಾಗಿ, ಸಂದರ್ಭೋಚಿತವಾಗಿ ಇತ್ತ ದಾನ ಶ್ರೇಷ್ಠ, ಪರಿಣಾಮಕಾರಿ.

ಇಚ್ಛೆಯನು ಅರಿದಿತ್ತ ನುಚ್ಚೊಂದು ಮಾಣಿಕವು
ಇಚ್ಛೆಯ ತೀರ್ದ ಬಳಿಕಿತ್ತ ಮಾಣಿಕವು
ನುಚ್ಚಿನಿಂದತ್ತ ಸರ್ವಜ್ಞ

ಅದು ನುಚ್ಚಿನಷ್ಟು ಸಣ್ಣ ಪ್ರಮಾಣದ ದಾನವೇ ಇದ್ದೀತು; ಅದು ಸಮಯಕ್ಕೆ ದೊರೆತರೆ ಸಫಲ, ಸಾರ್ಥಕ. ಅಗತ್ಯ ತೀರಿದ ಮೇಲೆ, ಸಿಕ್ಕರೇನು ಪುರುಷಾರ್ಥ!

ಮರಣಾಂತಿಕ ರೋಗಿಯ ಚಿಕಿತ್ಸೆಗೆ ಬೇಕಾದ ಹಣ ಅಂದೆ ದೊರೆತರೆ ಪ್ರಯೋಜನ, ಜೀವ ಉಳಿದೀತು! ಸಮಯ ಮೀರಿ, ರೋಗ ಉಲ್ಬಣಿಸಿ, ರೋಗಿ ನಿಧನವಾದ ಮೇಲೆ ಅದರ ಹತ್ತುಪಟ್ಟು ದೊರೆತರೂ ಅದರಿಂದಾದ ಲಾಭವೇನು?

ದಾನಗಳಲ್ಲಿ ಅನ್ನದಾನವೇ ಶ್ರೇಷ್ಠ, ಅನ್ನದಾನವೇ ಸಾಮಾಜಿಕ ಪಿಡುಗಾದ ಹಸಿವನ್ನು ಇಲ್ಲಗೈವ ದಿವ್ಯೌಷಧ ಎಂಬ ಮತ ಸರ್ವಜ್ಞನದು. 'ಅನ್ನವನು ಇಕ್ಕುವುದು', 'ಯತಿಗೊಂದು ತುತ್ತನಿಕ್ಕುವುದು', 'ಕರೆದು ಜಂಗಮಕಿಕ್ಕು', 'ಹಸಿದವರಿಗಶನವನಿಕ್ಕು', 'ಹಸಿದರ್ಗೆ ನೀನೊಲಿದಿಕ್ಕು', 'ತಿಳಿದುಪ್ಪವೆರೆ', 'ಅಟ್ಟುಂಬ ಕಾಲದಲೆ ಕೊಟ್ಟುಂಬುದು', 'ಅನ್ನವನಿಕ್ಕುವ ಭಿನ್ನ ಜಾತಿಯೇ ಕುಲಜ', 'ಅನ್ನವನು ಇಕ್ಕಿದನು ಉನ್ನತವ ಪಡೆಯುವನು', 'ಕರೆದುಣ್ಣದವನಿರವು ಕಾಗೆಗು ಕಷ್ಟ', 'ಕೊಟ್ಟುಂಬ ಕಾಲದಲಿ ಕೊಟ್ಟಣಲಿಕರಿಯದೆ'.

ಅನ್ನದಾನಗಳಿಂದ ಮುನ್ನ ದಾನಗಳಿಲ್ಲ
ಅನ್ನಕ್ಕೆ ಮಿಗಿಲು ಇನ್ನಿಲ್ಲ, ಜಗದೊಳಗೆ
ಅನ್ನವೇ ಪ್ರಾಣ ಸರ್ವಜ್ಞ

ಎಲ್ಲ ಸಾಮಾಜಿಕ ಪಾಪ ಮೂಲ ಹಸಿದ ಹೊಟ್ಟೆ. ಆದ್ದರಿಂದ ಮೇಲಿನ ವಚನಗಳಲ್ಲಿ ಎಲ್ಲ ದಾನಕ್ಕೆ ಮಿಗಿಲಾದುದು ಅನ್ನದಾನ, ಅನ್ನವೇ ಪ್ರಾಣ ಎಂದು ಅವಧಾರಣೆಯೊಡನೆ ಉದ್ಘೋಷಿಸಿದ್ದಾನೆ. ಅನ್ನ ಹಸಿವನ್ನು ಇಲ್ಲವಾಗಿಸುತ್ತದೆ. ಹಸಿದವರನ್ನು ತಣಿಸುವುದು ಆಧುನಿಕ ಪ್ರಪಂಚದಲ್ಲೂ, ವಿಶ್ವಸಂಸ್ಥೆಯಂಥ ಪ್ರಾತಿನಿಧಿಕ ಸಂಸ್ಥೆಯ ದೊಡ್ಡ ಸವಾಲು.

ಸ್ವಾಮಿ ವಿವೇಕಾನಂದರ ಈ ಮಾತು ಈ ಪ್ರಸ್ತಾಪದಲ್ಲಿ ಸ್ಮರಣಯೋಗ್ಯವಾಗಿದೆ. "Untill there is a single day in my country is without food my whole religion will be to feed it". ಈ ನಗ್ನಸತ್ಯ ಸರ್ವಜ್ಞನಿಗೆ ಸ್ಪಷ್ಟಗೋಚರವಾಗಿತ್ತು.

ಇಂದಿಗೂ ಮಠಮಾನ್ಯಗಳಲ್ಲಿ ಪ್ರಸಿದ್ಧ ದೇವಾಲಯಗಳಲ್ಲಿ ನಿತ್ಯ ಅನ್ನದಾನದ ವ್ಯವಸ್ಥೆ ಇರುವುದು, ಅದಕ್ಕೆ ಅಪಾರ ಜನಸ್ತೋಮ ಮುತ್ತಿಕೊಳ್ಳುತ್ತಿರುವುದು ನಿತ್ಯದೃಶ್ಯ.

ಸಮಾಜದಲ್ಲಿ ಸಂಪತ್ತಿನ ಸಮವಿತರಣೆ ಮಾಡುವಂಥ ಆಡಳಿತ ವ್ಯವಸ್ಥೆ ಇರುವುದಾದರೆ, ಒಂದೆಡೆ ದಾನಿಗಳ ವರ್ಗ, ಮತ್ತೊಂದೆಡೆ ಒಂದು ಮೆಟ್ಟಿಲು ಕೆಳಗೆ ನಿಂತ ಯಾಚಕವರ್ಗ ಸೃಷ್ಟಿಯಾಗುತ್ತಿರಲಿಲ್ಲವೇನೋ? ಬಸವಾದಿಶರಣರು ದಾಸೋಹಕ್ಕೆ ಕೊಟ್ಟ ಮಹತ್ತ್ವ. ಅನ್ನದಾನವನ್ನು ಎತ್ತಿ ಹಿಡಿಯಲು ಸರ್ವಜ್ಞನಿಗೆ ಪ್ರೇರಣೆ ಕೊಟ್ಟಿರಬಹುದು. ಅಲ್ಲದೇ ಮೊದಲೇ ತಿಳಿಸಿದಂತೆ, ದಾನವನ್ನು ಒಂದು 'ಮೌಲ್ಯ'ವೆಂದು ಸ್ವೀಕರಿಸಿದ ಸಮಾಜದಲ್ಲಿ ದಾನಸ್ವೀಕಾರ ಅಥವಾ ಪರಿಗ್ರಹ 'ಅವಮಾನ', 'ನಿಷಿದ್ಧ' ಎಂದು ತಲ್ಲಣಗೊಳ್ಳುವ ಪ್ರಸಂಗವೇ ಏಳುವುದಿಲ್ಲ. ಅಲ್ಲವೆ? ಅನ್ನದಾನಕ್ಕೆ "ಪ್ರಸಾದ" ಎಂಬ ಉದಾತ್ತೀಕರಿಸಿದ ಹೆಸರೂ ಇದೆ. ಶ್ರೀಮಂತರಲ್ಲಿ

ಅಥವಾ ಉಳ್ಳವರಲ್ಲಿ ಉಳ್ಳ ದ್ರವ್ಯ ಈ ಅನ್ನದಾನ ವ್ಯವಸ್ಥೆಗೆ ಹರಿದು ಬರುವುದರಿಂದ ಪರೋಕ್ಷವಾಗಿ 'ಸಂಗ್ರಹ' ವಿತರಣೆಯಾಗುತ್ತದೆ.

ಇದೇ ವಿಚಾರಧಾರೆಯನ್ನು ಮುಂದುವರಿಸುತ್ತಾ ಸರ್ವಜ್ಞ ದಾನಕ್ಕೆ ಇರುವ ಕಂಟಕಗಳನ್ನು ಪ್ರಸ್ತಾಪಿಸುತ್ತಾನೆ. ಕೆಲವರು ಜಿಪುಣರಿರುತ್ತಾರೆ. ಮಹಾನಯವಂಚಕರು. ಅರ್ಥಿಗೆ ಇಲ್ಲ ಎಂದು ಒಂದೆ ಸಲ ನೇರಹೇಳಿಬಿಡುವುದಿಲ್ಲ.

ಇಲ್ಲವೆನ್ನಲೊಲ್ಲ, ಕೊಡಲೊಲ್ಲನು
ಆ ಪಾಪಿ, ಕೊಲ್ಲದೆ ಕೊಂದ

ಅರ್ಥಿ ದೈನ್ಯದಿಂದ, ನಿರೀಕ್ಷೆಯಿಂದ ನಿಂತೇ ಇರುತ್ತಾನೆ. ಇದು ಕೊಲ್ಲದೆ ಕೊಂದಂಥ ಕ್ರೂರಕರ್ಮ.

ದಾನಿ ಕೊಡುವುದರಿಂದ ದೊಡ್ಡ ಕಾರ್ಯ ಮಾಡಿದ ಎನ್ನುವಂತಿಲ್ಲ. ನಿಜವಾಗಿಯೂ ಬೇಡುವುದು ದೊಡ್ಡ ಕೆಲಸ. ಆರಡಿ ದೇಹವನ್ನು ಮೂರಡಿಗೆ ಇಳಿಸಿಕೊಂಡು ಕೈಯೊಡ್ಡುವುದು ದೊಡ್ಡ ಸಾಹಸವೇ ಸರಿ. ಹಾಗೆ ಬೇಡಿದವರಿಗೆ ಈಯದವನು ದೊಡ್ಡ ಸಾಹಸಿಯೇ! 'ಅದಕ್ಕಿಂತಲೂ ದೊಡ್ಡಸಾಹಸವೆಂದರೆ, ಕಷ್ಟದ ಕೆಲಸವೆಂದರೆ ದಾನಕ್ಕೆ ಅಡ್ಡಿ ಮಾಡುವುದು! (ವಿಷ್ಣುವೇ ಬೇಡುವಾಗ ವಾಮನನಾಗಿ ಕುಬ್ಜನಾಗಲಿಲ್ಲವೆ?).

ಮತ್ತೆ ಕೆಲವು ಲೋಭಿಗಳು ಇರುತ್ತಾರೆ, ಕೆಚ್ಚಲಲ್ಲಿರುವ ಉಣ್ಣೆಯಂತೆ, ಜೇನುಹುಳ ಹಟ್ಟಿಯಲಿ ಜೇನಿಟ್ಟು ಪರರಿಗೆ ಕೊಟ್ಟಂತೆ; ದಾನಗೈಯಲು ಹಿಂತೆಗೆಯುತ್ತಾರೆ, ಧಾರಾಳವಾಗಿ ದಂಡವನ್ನು (ಅಪರಾಧ ಶುಲ್ಕ ಅಥವಾ ತೆರಿಗೆ) ತೆರುತ್ತಾರೆ.

ಹೀಗೆ ದಾನವನ್ನು ಕುರಿತು ಆಮೂಲಾಗ್ರ, ತಲಸ್ಪರ್ಶಿಯಾಗಿ ಸರ್ವಜ್ಞ ವಿಚಾರ ಮಾಡಿದ್ದಾನೆ. ದಾನದ ಔಚಿತ್ಯವನ್ನು, ಮಹತ್ತ್ವವನ್ನು, ಅನಿವಾರ್ಯತೆಯನ್ನು ಇನ್ನಿಲ್ಲ ಎಂಬಂತೆ ಸಾರಿ ಸಾರಿ ಉದ್ಘೋಷಿಸಿ ಜನರನ್ನು ಧರ್ಮ ಮಾರ್ಗಕ್ಕೆ ಎಳೆಯುವ ಪ್ರಯತ್ನ ಮಾಡಿದ್ದಾನೆ.

### ೩.೭ ಸರ್ವಜ್ಞನ ವಚನಗಳಲ್ಲಿ ಹಣ ಅಥವ ದ್ರವ್ಯದ ಆಶೆ

ಸಾಮಾನ್ಯವಾಗಿ ಹೆಣ್ಣು, ಹೊನ್ನು, ಮಣ್ಣು – ಆಕರ್ಷಣೆಗಳು, ಸೆಳೆತಗಳು ಮಾನವನ ಸಮಸ್ತ ಚಟುವಟಿಕೆಗಳ ಮೂಲವೇ ಇವು. ಇನ್ನು ಮೂಲಭೂತವಾಗಿ ವಿಚಾರ ಮಾಡಿದರೆ ಕಾಮ ಅಥವಾ ಆಶೆ ಮೂಲಘಟಕ. ಇಲ್ಲಿ ಹೆಣ್ಣು ಎಂದಾಗ ಕಾಮಕ್ಕೆ ಪರ್ಯಾಯ ಶಬ್ದ ಎಂದು ತಿಳಿಯಬೇಕು. ಹೆಣ್ಣಿಗೆ ಗಂಡು ಕಾಮ, ಗಂಡಿಗೆ ಹೆಣ್ಣು ಕಾಮ. ಅಲ್ಲಮನ ಸುಪ್ರಸಿದ್ಧ ವೈಚಾರಿಕ ಸ್ಫೋಟ ಇದು :

ಹೆಣ್ಣು ಮಾಯೆಯೆಂಬರು, ಗಂಡು ಮಾಯೆಯೆಂಬರು. ಹೆಣ್ಣು ಗಂಡು ಮಾಯೆಯಲ್ಲ. ಮನದ ಮುಂದಣ ಆಶೆಯೇ ಮಾಯೆ ಕಾಣಾ ಗುಹೇಶ್ವರಾ. ಇದು ಕೊನೆಯ ಮಾತು. ಚಿಂತಾರತ್ನ, ಅಮೂಲ್ಯ ನಿಧಿ,

ಕೆದಕಿದಷ್ಟು, ಶೋಧಿಸಿದಷ್ಟು ದಕ್ಕುವ ಅಕ್ಷಯ ನಿಧಿ. ಅರಿಷಡ್ವರ್ಗಗಳಲ್ಲಿ ಮೊದಲ ಸ್ಥಾನ ಕಾಮಕ್ಕೆ. ಕಾಮದ ಒಂದು ಮುಖವೇ ದ್ರವ್ಯ, ಹಣ.

ಮಾನವ ಹಣವೇ ಸರ್ವಸ್ವವೆಂದು ತಿಳಿದು ಧನ ಸಂಗ್ರಹ ಮಾಡುತ್ತಾನೆ. ಅದು ಶಾಸ್ವತ ಎಂದು ತಿಳಿಯುತ್ತಾನೆ, ಅದು ಸರ್ವಾರ್ಥ ಸಾಧಕ ಎಂದು ಭ್ರಮಿಸುತ್ತಾನೆ.

ಪಿತ್ರಾರ್ಜಿತವಾದ ಹಣವನ್ನು ಸೋದರನಿಗೆ ಕೊಡದೆ ವಂಚಿಸಿ ಆ ಕಿತ್ತಾಟದಲ್ಲೋ, ಕದನದಲ್ಲೋ ಮರಣವನ್ನಪ್ಪುತ್ತಾನೆ, ಅಥವಾ ಮರಣ ಇವನನ್ನು ಅಪ್ಪುತ್ತದೆ.

ಮಡಿದಿಹರೆ ಅದನು (ಆ ದ್ರವ್ಯವನ್ನು) ಇವನೊಡನೆ ಹೂಳುತ್ತಾರೆಯೇ?

ಧನಕನಕವುಳ್ಳನಕ ದಿನಕರನವೋಲಕ್ಕು
ಧನಕನಕ ಹೋದ ಮರುದಿನ ಹಾಳೂರ
ಶುನಕ ನಂತಕ್ಕು ಸರ್ವಜ್ಞ

ಇದ್ದಾಗ ಎಲ್ಲಾ – ಬಂಧುಬಳಗ, ನೆರೆ ಹೊರೆ, ಸಮಾಜದ ಪ್ರತಿಷ್ಠೆಯ ಸ್ಥಾನಮಾನ. ಆಕಾಶದಲ್ಲಿ ಸೂರ್ಯನ ಸ್ಥಾನ ತಾನೇ ಕೇಂದ್ರ ಬಿಂದು. ಅವೆಲ್ಲಾ ಸಿರಿ ಜಾರಿ ಹೋದಾಗ ಹಾಳೂರ ಶುನಕನ ಗತಿ. ತಾನು ಒಂಟಿ, ಕೇಳುವವರಿಲ್ಲ, ನುಡಿಸುವವರಿಲ್ಲ, ಹಾಳೂರಿನ ಶುನಕ ಅಲೆದಾಡಿದರೂ ಬಗುಳಿದರೂ, ತಂಗಳಿಕ್ಕುವವರು ಇಲ್ಲ. ತನ್ನ ಕೂಗೇ ತನಗೆ ಪ್ರತಿಧ್ವನಿಯಾಗಿ ಬಂದು ತಾಗುವುದು. ಇದೇ ಸ್ಥಿತಿಯನ್ನು ವಿವರವಾಗಿ ವರ್ಣಿಸಿದ್ದಾನೆ. ಹಣವಿದ್ದಾಗ ಗರುಡನ ವೈಭವ. ಹಕ್ಕಿಗಳಲ್ಲಿ ಗರುಡ ಪಕ್ಷಿರಾಜ ತಾನೇ, ಅಂತ ಸ್ಥಿತಿ.ಮೇಲೆ ಆಕಾಶದಲ್ಲಿ ತೇಲುವ ವೈಭವೋಪೇತ ಸ್ಥಾನ–ಸಿರಿ ಕಳೆದು ಹೋದ ಮರುದಿನವೇ ಹೀನಾಯ ಸ್ಥಿತಿ, ನಾಯಿಪಾಡಲ್ಲ–"ಮುದಿನಾಯಿ ಕರಡಿನ ಪಾಡು". ಅತ್ಯಂತ ಕಟುವಾಗಿ ಹೀನಾಯ ಸ್ಥಿತಿಯನ್ನು ಬಣ್ಣಿಸಿದ್ದಾನೆ.

ಸಿರಿಯಿದ್ದಾಗ ಬಂಟ, ಎಲ್ಲರ ನೆಂಟ, ಎಲ್ಲರನ್ನೂ ರಕ್ಷಿಸುವ ವೀರ.ವೀರೋಚಿತ ಗೌರವ ಸಿರಿ ಕೈಬಿಟ್ಟ ಕಾಲಕ್ಕೆ ಹುಳುತಿಂದ ದಂಟು ಎಲ್ಲಿಂದ ಎಲ್ಲಿಗೆ ಪಥನ.

ಸಿರಿಯಣ್ಣನುಳ್ಳನಕ ಹಿರಿಯಣ್ಣ ನೆನೆಸಿಪ್ಪ
ಸಿರಿಯಣ್ಣ ಹೋದ ಮರುದಿನ ಹಿರಿಯಣ್ಣ
ಹಿರಿಯಣ್ಣನೆಂದ ಸರ್ವಜ್ಞ

ಹಣವಿರುವ ತನಕ ಪಲ್ಲಕ್ಕಿಯಲ್ಲಿ ಮೆರೆತ. ಹಣ ಹೋದ ಮರುದಿನ ಕೋಳದಲ್ಲಿ ಸೆರೆ. ಕೊನೆಗೆ ಮಡದಿ ಮಕ್ಕಳು ಒಡಲು, ಒಡವೆ ಇರುವ ತನಕ.ಎರಡರಲ್ಲಿ ಒಂದು ತಪ್ಪಿದರು, ಎರಡು ತಪ್ಪಿದರೂ ಅವರೆಲ್ಲ ಪಕ್ಕಕ್ಕೆ ಜಾರುವರು

ಹೀಗೆ ದ್ರವ್ಯ ಅಶಾಸ್ವತವೆಂಬ ಧ್ರುವಸತ್ಯವನ್ನು ಬೇರೆ ಬೇರೆ ಸಂಧರ್ಭಗಳಲ್ಲಿ, ಬೇರೆ ಬೇರೆ ಊರುಗಳಲ್ಲಿ, ಬೇರೆ ಬೇರೆ ಕಾಲದೇಶಗಳಲ್ಲಿ ಹೇಳಿರಬೇಕು ಅದಕ್ಕೆ ಇಲ್ಲಿ ಪುನರುಕ್ತಿ ಇದೆ.ವಚನ ಸಂಗ್ರಹಕಾರರು ಸಂಗ್ರಹಿಸಿ ಒಂದೆಡೆ, ಒಂದು ಶೀರ್ಷಿಕೆಯಡಿ ಇರಿಸಿದ್ದಾರೆ.

ಬೇರೆ ಬೇರೆ ವಿಷಯಗಳನ್ನು ಪ್ರಸ್ತಾಪಿಸುವಾಗಲೂ ಪ್ರಾಸಂಗಿಕವಾಗಿ ಹೊನ್ನು ಅಥವಾ ಹಣದ ಮಾತು ಬಂದಿದೆ.ಹೊನ್ನಿನ ಗುಣವೇನೆಂದರೆ ಸದಸದ್ವಿವೇಕವನ್ನು (ಸತ್+ಅಸತ್=ಸದಸದ್) ನಾಶ ಮಾಡುವುದು.

ಹೊನ್ನು ಎಂಬ ಶಬ್ದ ಕೇಳಿದಾಕ್ಷಣ ಯತಿ, ಸತಿ, ಸಿರಿವಂತ–ಮೂವರು ಭ್ರಮಿತರಾಗುತ್ತಾರೆ ಅಂದರೆ ವಶವಾಗುತ್ತಾರೆ ಅದಕ್ಕೆ ದಾಸರಾಗುತ್ತಾರೆ, ಹುಚ್ಚರಾಗುತ್ತಾರೆ.

ಈ ಪ್ರಸಿದ್ಧ ವಚನವನ್ನು ನೋಡಿ :

ವಚನದೊಳಗೆಲ್ಲವರು ಶುಚಿ, ವೀರ, ಸಾಧುಗಳು
ಕುಚ, ಶಸ್ತ್ರ, ಹೇಯ ಸೋಂಕಿದರೆ ಲೋಕದೊಳ
ಗಚಲದವರಾರು ಸರ್ವಜ್ಞ

ತಾನು ಶೀಲವಂತ ಎಂದುಕೊಳ್ಳುತ್ತಾನೆ, ತಾನು ವೀರ ಎಂದುಕೊಳ್ಳುತ್ತಾನೆ, ತಾನು ಸನ್ಯಾಸಿ ಎಂದು ಕೊಳ್ಳುತ್ತಾನೆ. ಕ್ರಮವಾಗಿ ಕುಚ, ಶಸ್ತ್ರ, ಹೇಯಗಳ ಸ್ಪರ್ಶಕ್ಕೆ ಅಲ್ಲಾಡಿ ಹೋಗುತ್ತಾರೆ. ಇಲ್ಲಿ ಶುಚಿ, ಸಾಧುಗಳ ದೌರ್ಬಲ್ಯದ ಸೂಚನೆ ಸರಿ, ಆದರೆ ವೀರರಿಗೆ ಶಸ್ತ್ರ ಸೋಂಕಿದರೆ ಆತ ಉತ್ಸಾಹಗೊಂಡರೆ, ಅದು ವೀರೋಚಿತ ಧರ್ಮವಲ್ಲವೆ? ಅದು ದೋಷವಲ್ಲವಲ್ಲ? ಹೊನ್ನಿನ ಅಧಮ್ಯ ಆಕರ್ಷಣೆಯನ್ನು ಕುರಿತು, ಇತರ ಆಕರ್ಷಕ ವಸ್ತುಗಳೊಡನೆ ಕೂಡಿಸಿ ಪಟ್ಟಿ ಮಾಡಿದ್ದಾನೆ

ಹೆಣ್ಣನ್ನು ಹೊನ್ನನ್ನು ಹಣ್ಣಾದ ಮರಗಳನು
ಕಣ್ಣಿನಲಿ ಕಂಡು ಮನದಲ್ಲಿ ಬಯಸದಿಹ
ಅಣ್ಣಗಳು ಯಾರು ಸರ್ವಜ್ಞ

ಹೊನ್ನು ಅಥವಾ ಹಣದ ಪ್ರಭಾವ ಅಥವಾ ಶಕ್ತಿ ಎಂಥದ್ದು ಅಂದರೆ

ಅದು ತಾನು ಮುಂದೆ ನಿಲ್ಲುತ್ತದೆ

ನಮ್ಮವರನ್ನು ಮರೆಯುವಂತೆ ಮಾಡುತ್ತದೆ (ಹಣದ ಮದ)

ಬೇರೆ ಯಾರನ್ನೊ ಸ್ತುತಿಸುವಂತೆ ಮಾಡುತ್ತದೆ.

ರೂಪ, ಶಕ್ತಿ, ಪರಾಕ್ರಮ ಎಲ್ಲವೂ ಮಹಾಲಕ್ಷ್ಮಿಯನ್ನು ಅನುಸರಿಸುತ್ತವೆ.ಲಕ್ಷ್ಮಿ ತೊಲಗಿದರೆ ಅವೆಲ್ಲ ಇದ್ದೂ ನಿಷ್ಪ್ರಯೋಜಕ, ಕಳಾಹೀನ ಲಕ್ಷ್ಮಿಯ ಸೆರಗನ್ನು ಹಿಡಿದು ಈ ಗುಣಾವಳಿಗಳು ಜೀವಿಸಿವೆ.

ಇಂಥ ಸಿರಿ, ಎಲ್ಲ ಸಂದರ್ಭಗಳಲ್ಲೂ ಪ್ರಯತ್ನದ ಫಲವಾಗಿ, ಕಾಯಕದ ಫಲವಾಗಿ ಕೈ ಸೇರುತ್ತದೆ ಎನ್ನುವಂತಿಲ್ಲ, ವಿಚಿತ್ರ ಇದು.

ಏನಾನು ನೆವದಿಂದ ತಾನೆ ಬಪ್ಪುದು ಸಿರಿಯು
ಕಾನನದೊಳಗೆ ಗಜಹುಟ್ಟಿ ಪಟ್ಟಕ್ಕೆ
ತಾನೆ ಬಪ್ಪಂತೆ ಸರ್ವಜ್ಞ

ರಾಜಾನುಗ್ರಹವೋ, ವ್ಯಾಪಾರದಲ್ಲಿ ಅತಿಯಾದ ಲಾಭವೋ, ನಿಧಿ ನಿಕ್ಷೇಪ ನಿಧಾನಗಳ ವಶವಾಗುವುದೋ, ಅಂತು ದಿಢೀರನೆ ಸಿರಿ ಕೈಸೇರುವುದು. ಈ ಆಕಸ್ಮಿಕ ಯೋಗ ಹೇಗೆಂದರೆ ಕಾನನದಲ್ಲಿ ಹುಟ್ಟಿದ ಗಜ ಶಿಶು ಬೆಳೆದು ಭೀಮಾಕಾರವಾಗಿ ಕಾಡಿನ ಅಂಚಿನಲ್ಲಿ ಪ್ರತ್ಯಕ್ಷವಾಗುವಂತೆ ಅಥವಾ ರಾಜನ ಪಟ್ಟದಾನೆಯಾಗಿ ಆಯ್ಕೆಯಾಗುವಂತೆ ಸಿರಿ ಪಟ್ಟಕ್ಕೆ ಏರುತ್ತದೆ (ಈ ಉಪಮಾನ ವಿನೂತನವಾಗಿದೆ. ಕವಿ ಸರ್ವಜ್ಞನ ಪ್ರತಿಭೆಯ ದ್ಯೋತಕವಾಗಿದೆ.)

ಅಂಥ ಸಿರಿ ಪದವಿ ಅಷ್ಟೆ ಸುಲಭದಲ್ಲಿ, ನಿಮಿಷಾರ್ಧದಲ್ಲಿ ಕಳೆದು ಹೋಗಬಹುದು.

ಕಾನನದಲ್ಲಿ ಕಿಡಿಹುಟ್ಟಿ ಆ ವನವು
ತಾನೇ ಬೇವಂತೆ ಸರ್ವಜ್ಞ

ಸೀಸರನ ರಾಜ್ಯಸಿರಿ ನಿರ್ನಾಮವಾದುದನ್ನು ವಿಜಯನಗರ ಸಾಮ್ರಾಜ್ಯ ಸಿರಿಸಂಪದ ಹಾಳಾದ್ದನ್ನು ಇತಿಹಾಸ ದಾಖಲಿಸಿಲ್ಲವೆ? ಆದ್ದರಿಂದ ವಿವೇಕದಿಂದ, ಎಚ್ಚರದಿಂದ ಬದುಕಬೇಕು.

ಸಿರಿಯು ಸಂಸಾರವು ಸ್ಥಿರವೆಂದು ನಂಬದಿರಿ
ಹಿರಿದೊಂದು ಸಂತೆ ನೆರೆದೊಂದು ಜಾವಕ್ಕೆ
ಹರೆದು ಹೋಹಂತೆ ಸರ್ವಜ್ಞ

ಸಂಸಾರ ನೀರ ಮೇಲಿನ ಗುಳ್ಳೆ ಎಂದಿದ್ದಾರೆ, ಸಂಸಾರ ಸಂತೆಯ ಕೂಟ ನಾಲ್ಕು ದಿನದ ಬಾಳು ಎಂದಿದ್ದಾರೆ. ಪ್ರಾಜ್ಞರು. ಜ್ಞಾನಿಗಳು. ಈ ಸಿರಿ ಸಂಪದವೂ ಅಷ್ಟೆ. ಇದ್ದಾಗ ಸಂತೆಯ ಸಂಭ್ರಮ. ಜಾರಿಹೋದಾಗ ನಿರ್ಜನ, ನೀರವ ಸ್ಮಶಾನ, ಸಂತೆಬಯಲು.

ಇನ್ನು ವೇಶ್ಯಾಸ್ತ್ರೀ ಪದ್ಧತಿಯಲ್ಲಿ ಹಣದ ಮಹಿಮೆ, ಪ್ರಭಾವ, ವೇಶ್ಯಯರ ಧನದಾಹವನ್ನು ವಿವರವಾಗಿಯೇ ನಿರೂಪಿಸಿದ್ದಾನೆ.ಸಮಾಜ ಜೀವನದಲ್ಲಿ ಹಣಗಳಿಕೆಗೆ ನೂರು ಮಾರ್ಗ. ಕೆಲವು ಸಾತ್ವಿಕ ಮಾರ್ಗ, ಕೆಲವು ಸಲ್ಲದ ಮಾರ್ಗ, ಸೂಳೆಯೂ, ಕಳ್ಳನೂ ಹಣ ಗಳಿಸುತ್ತಾರೆ ಅಥವಾ ದೋಚುತ್ತಾರೆ. ಕಳ್ಳನೋ, ಸುಳ್ಳನೋ ಹಣವಿದ್ದರೆ ಸಮಾಜದಲ್ಲಿ ಸಲ್ಲುತ್ತಾರೆ.

ಬಡವನಿದ್ದುದನಾಡೇ ಕಡೆಗೆ ಪೋಗೆಂಬುವರು
ಒಡವೆಯುಳ್ಳವರು ಸುಡುಗಾಡ ನುಡಿದರೂ
ಪೊಡವಿಯೊಳಗಧಿಕ ಸರ್ವಜ್ಞ

ಕಾಂಚನಂ ಕಾರ್ಯಸಿದ್ಧಿ, ಎಂಬ ಲೋಕೋಕ್ತಿ ಇಲ್ಲವೆ? ಆಧುನಿಕ ಕಾಲದಲ್ಲಿ ದ.ರಾ.ಬೇಂದ್ರೆಯವರು

ಕುರುಡು ಕಾಂಚಾಣ ಕುಣಿಯುತಲಿತ್ತು
ಕಾಲಿಗೆ ಬಿದ್ದವರ ತುಳಿಯುತಲಿತ್ತು ಎಂದು ಹಾಡಿಲ್ಲವೆ?

ಅಂಥ ದ್ರವ್ಯವನ್ನು ಸಜ್ಜನರಿಗೆ, ಸಂತರಿಗೆ ದಾನ ಕೊಡುವುದರ ಮೂಲಕ, ಸಂಪತ್ತಿನ ಸದ್ವಿನಿಯೋಗ, ಹಣದ ಪ್ರಸಾರ ಜರುಗಿ, ಮೇಲಾಟ, ಸ್ಪರ್ಧೆ, ಜಗಳ ತಪ್ಪುತ್ತದೆ ಎಂಬುದು ಸರ್ವಜ್ಞ ಪರ್ಯಾಯವಾಗಿ ಕಂಡುಕೊಂಡ ತತ್ತ್ವ.

ಅದನ್ನು ದಾನ ಪದ್ಧತಿಯಲ್ಲಿ ನಾವು ನೋಡಿದ್ದೇವೆ.

### ೩.೮ ಸರ್ವಜ್ಞನ ವಚನಗಳಲ್ಲಿ ಸಾಲ ಅಥವಾ ಋಣ

ಧನ ಸಂಪಾದನೆ, ಧನದ ವಿತರಣೆ, ಧನದ ಮಹಿಮೆ, ಧನಲಾಭ, ಧನನಷ್ಟ–ಇವುಗಳ ಬಗ್ಗೆ ಸರ್ವಜ್ಞನ ಗ್ರಹಿಕೆಗಳನ್ನು, ವಿಚಾರಗಳನ್ನು, ಅವನ ವಚನಗಳನ್ನು ಆಧರಿಸಿಯೇ ವಿವೇಚಿಸಿದ್ದಾಯಿತು

ಹಣದ ಒಂದು ರೂಪ ಚಿನ್ನವಾಗಿಯೇ ಚಲಾವಣೆಯಲ್ಲಿ ನಗದಾದರೆ ಮತ್ತೊಂದು ರೂಪ ಸಾಲವಾಗಿ ವ್ಯವಹರಿಸುತ್ತದೆ. ವಿತ್ತ ಅಥವ ಆರ್ಥಿಕ ಪ್ರಪಂಚದಲ್ಲಿ ನಗದು ರೂಪದಷ್ಟೆ ಸಾಲ ರೂಪವೂ ಪ್ರಸಿದ್ಧ. ಹಣ ಇದ್ದವರ ಕೈಯಿಂದ ಇಲ್ಲದವರ ಕೈಗೆ ನಗದಾಗಿ ಯಾವುದೇ ಸೇವೆಯ ಪ್ರತಿಫಲವಾಗಿ ಸೇರಬಹುದು.ದಾನವಾಗಿ ಹೋಗಬಹುದು, ಸಾಲವಾಗಿ ಹೋಗಬಹುದು, ದಾನ ಪ್ರೀತಿಯಿಂದ ಕೊಟ್ಟದ್ದು, ಕರುಣೆಯಿಂದ ಕೊಟ್ಟದ್ದು ಮತ್ತೆ ವಾಪಸ್ಸಾಗದ್ದು.

ಆದರೆ ಸಾಲ ಹಾಗಲ್ಲ.ಅದು ಬಡ್ಡಿಯೊಡನೆ ವಾಪಸ್ಸಾಗಬೇಕು.ಇದು ವ್ಯವಹಾರ, ಒಪ್ಪಂದ ಎಲ್ಲ ಕಾಲದಲ್ಲು ಆರ್ಥಿಕ ಚಟುವಟಿಕೆಗಳಿಗೆ ಬೆಂಬಲವಾಗಿ ನಗದಿನಷ್ಟೆ ಉದ್ಧರಿ ಅಥವ ಸಾಲ ಪಾತ್ರವಹಿಸಿದೆ. ಆಧುನಿಕ ಪ್ರಪಂಚದಲ್ಲೂ ಆರ್ಥಿಕ ಕ್ಷೇತ್ರದಲ್ಲಿ ಸಾಲ ಪ್ರಧಾನ ಪಾತ್ರ ವಹಿಸುತ್ತದೆ. ವ್ಯಕ್ತಿವ್ಯಕ್ತಿಗಳ ನಡುವೆ ಇರಲಿ, ಸಂಸ್ಥೆ ಮತ್ತು ವ್ಯಕ್ತಿ, ಸಂಸ್ಥೆ ಮತ್ತು ಸಂಸ್ಥೆ, ರಾಷ್ಟ್ರ ಸರ್ಕಾರ ಮತ್ತು ರಾಜ್ಯ ಸರ್ಕಾರ, ವಾಣಿಜ್ಯ ಸಂಸ್ಥೆಗಳು, ಬ್ಯಾಂಕುಗಳು, ರಾಷ್ಟ್ರರಾಷ್ಟ್ರಗಳು ಅಂತರರಾಷ್ಟ್ರೀಯ ಮಟ್ಟದಲ್ಲಿ ಸಾಲ ಪಡೆಯುತ್ತವೆ, ಕೊಡುತ್ತವೆ. ಸಾಲದ ವ್ಯವಸ್ಥೆ ಇಲ್ಲದಿದ್ದರೆ ಆರ್ಥಿಕ ವ್ಯವಹಾರವೇ ಸ್ಥಗಿತವಾಗಿಬಿಡಬಹುದು. ಸಾಲದ ತ್ರಿಕೋನವೆಂದರೆ ಸಾಲದ ಹಣ, ಸಾಲ ಕೊಡುವವನು, ಸಾಲ ತೆಗೆದುಕೊಳ್ಳುವವನು. ಚಲಾವಣೆಯಲ್ಲಿ ತೊಡಗದ ಹೆಚ್ಚಿನ ಹಣ ಸ್ಥಗಿತವಾಗಿದ್ದರೆ ಸಾಲದ ವ್ಯವಹಾರ ತೊಡಕಾಗುತ್ತದೆ, ಸಾಲಗಾರ ಮತ್ತು ಸಾಲಿಗನ ನಡುವೆ. ಸಾಲಗಾರನಿಗೆ

ದರ್ದಿಗೆ ಹಣ ಬೇಕು, ಸಾಲಿಗನಲ್ಲಿ ಸಾಲ ಕೊಡಲು ಹಣ ಇದೆ. ಇಂತಿಷ್ಟು ಬಡ್ಡಿ, ಇಂತಿಷ್ಟು ಕಾಲಮಿತಿಯಲ್ಲಿ ಹಿಂತಿರುಗಿಸಬೇಕು ಎಂಬ ಕರಾರು ಏರ್ಪಡುತ್ತದೆ. ಆದು ಲಿಖಿತ ಅಥವಾ ಅಲಿಖಿತ / ಮೌಖಿಕ ಕರಾರು ಇದ್ದೀತು.

ಈ ವ್ಯವಹಾರದಲ್ಲಿ ಸಾಲಗಾರ ಮತ್ತು ಸಾಲಿಗ ಇಬ್ಬರೂ ಪ್ರಾಮಾಣಿಕರಾಗಿರುವಷ್ಟು ಕಾಲ ಎಲ್ಲ ಸಲೀಸು. ಇಬ್ಬರಲ್ಲಿ ಒಬ್ಬರು ಕ್ಯಾತೆ ತೆಗೆಯಬಹುದು, ಕರಾರು ಮುರಿಯಬಹುದು. ಆಗ ಸಮಸ್ಯೆಗಳು ತಲೆ ಎತ್ತುತ್ತವೆ. ಸಾಲಿಗ ವಾಯಿದೆಗೆ ಮುನ್ನ ಮೂಲ ಧನವನ್ನು ವಾಪಸ್ಸು ಪಡೆಯುವ ಪ್ರಯತ್ನ ಮಾಡಬಹುದು, ಅಥವಾ ಬಡ್ಡಿ ಹೆಚ್ಚಿಸಬಹುದು. ಸಾಲಗಾರನೂ ಮೂಲ ಧನವನ್ನಾಗಲೀ, ಬಡ್ಡಿಯನ್ನಾಗಲೀ ಕೊಡದೆ ಕಾಡಿಸಬಹುದು. ವ್ಯಾಜ್ಯ ಪಂಚಾಯಿತಿ ಕಟ್ಟೆ ಹತ್ತುತ್ತಾರೆ. ನ್ಯಾಯಾಧಿಕರಣಕ್ಕೂ ಕೊಂಡೊಯ್ಯಬಹುದು. ಇದು ಇತಿಹಾಸ ಕಾಲದಲ್ಲು, ವರ್ತಮಾನದಲ್ಲು ಪ್ರಚಲಿತವೆ!

ಹೆಚ್ಚು ಬಡವರು, ಇಲ್ಲದವರು, ಅಹರ್ನಿಶಿ ಕಾಲಕ್ಷೇಪ ಮಾಡುವವರೇ ಇರುವ ನಮ್ಮ ನಾಡಿನಲ್ಲಿ ವಚನಕ್ಕೆ, ಧರ್ಮಕ್ಕೆ ಬದ್ಧರಾಗಿ ಸಾಲದ ವ್ಯವಹಾರದಲ್ಲಿ ತೊಡಗಿಕೊಳ್ಳುತ್ತಿದ್ದರು. ಇಲ್ಲಿ ವಚನ ಭಂಗವಾದಾಗ ಸಮಸ್ಯೆ, ತಕರಾರು.

ಆ ಸಮಸ್ತ ಸಾಲ ಜಾಲವನ್ನು ತನ್ನ ಅನುಭವದಿಂದ, ಸಮಾಜ ಪರಿವೀಕ್ಷಣೆಯ ಬಲದಿಂದ ಸರ್ವಜ್ಞ ಕವಿ ದಾಖಲಿಸಿದ್ದಾನೆ. ಆ ಕಾಲ ಖಂಡದ ಸಾಮಾಜಿಕ ಜೀವನದ ನೈಜ ಚಿತ್ರಣ ಇಲ್ಲಿ ದೊರೆಯುತ್ತದೆ ನೋಡೋಣ:

ಸಾಲವನ್ನು ಕೊಂಬಾಗ ಹಾಲು ಹಣ್ಣುಂಡಂತೆ
ಸಾಲಿಗನು ಬಂದು ಎಳೆವಾಗ ಕಿಬ್ಬದಿಯ
ಕೀಲು ಮುರಿದಂತೆ ಸರ್ವಜ್ಞ

ಇದಕ್ಕೆ ಪಾಠಾಂತರಗಳೂ ಇವೆ:

ಸಾಲವನು ಕೊಂಬಾಗ ಹಾಲು ಕೂಳುಂಬಂತೆ
ಸಾಲವ ಮರಳಿ ಕೊಡುವಾಗ ಕಿಬ್ಬದಿಯ
ಕೀಲು ಕೊಂಡಂತೆ ಸರ್ವಜ್ಞ

(ಇದಲ್ಲದೆ ಹಾಲು ಕೂಳು/ಹಾಲು ಹಣ್ಣು ಎಂಬುದಕ್ಕೆ ಹಾಲೋಗರ ಎಂದು ಮತ್ತೊಂದು ಪಾಠಾಂತರ ಇದೆ)

ಇದು ತುಂಬ ಜನಪ್ರಿಯ ಚಲಾವಣೆಯಲ್ಲಿರುವ ವಚನವಾದ್ದರಿಂದ ಅನೇಕ ಪಾಠಾಂತರಗಳನ್ನು ಪಡೆದುಕೊಂಡಿದೆ. ಅಲ್ಲದೆ, ಸ್ವತಃ ಸರ್ವಜ್ಞನೇ ಆ ಆಲೋಚನಾಂಶವನ್ನು ಆಧರಿಸಿ ಬೇರೆ ಬೇರೆ ಶ್ರೋತೃವರ್ಗದ ನಡುವೆ ಸ್ವಲ್ಪ ಭಿನ್ನವಾಗಿ ನುಡಿದಿರಬಹುದಾದ ಸಾಧ್ಯತೆಗಳಿವೆ. ಅಂದರೆ ಭಿನ್ನ ಪಾಠಗಳು ಸರ್ವಜ್ಞ ಕೃತವೇ ಇದ್ದೀತು.

ಪ್ರತ್ಯೇಕ ವಚನವೆಂಬಂತೆ ಮತ್ತೊಂದು ರೂಪಾಂತರವು ಸಂಕಲನಗಳಲ್ಲಿ (ಉತ್ತಂಗಿ) ದೊರೆಯುತ್ತಿದೆ. ಅದು:

ಸಾಲವನು ತರುವಾಗ ಹಾಲು ಬೋನುಂಡಂತೆ
ಸಾಲಿಗನು ಬಂದು ಕೇಳಿದರೆ ಕುಂಡೆಗೆ
ಚೇಳು ಕಡಿದಂತೆ ಸರ್ವಜ್ಞ

'ಕಿಬ್ಬದಿಯ ಕೀಲು ಮುರಿದಂತೆ', 'ಕುಂಡೆಗೆ ಚೇಳು ಕಡಿದಂತೆ' ನೋವಿನ, ಇಕ್ಕಟ್ಟಿನ, ಬಿಕ್ಕಟ್ಟಿನ, ಅಸುಖದ ಅನುಭವವನ್ನು ಎರಡು ಅಭಿವ್ಯಕ್ತಿಗಳು ಸಮರ್ಥವಾಗಿಯೇ ಕೊಡುತ್ತಿವೆ. ಒಂದು ನಾಗರಿಕ, ಸಭ್ಯ, ಮತ್ತೊಂದು ಅಸಭ್ಯ ಹಾಗೂ ಅನಾಗರಿಕ. ಇದು ಇಂದಿಗೂ ಸತ್ಯ ಚಿತ್ರಣವೇ ದರ್ದಿಗೆ, ಬೇಕುಗಳಿಗೆ, ನೂರೆಂಟು ಸಾಲಗಳಿಗೆ ಶರಣು. ಸಾಲದ ನೋಟಿಸ್ ಬಂದಾಗ ತಬ್ಬಿಬ್ಬು (ಗಾಂಧಿ ಸಾಲ, ಕಾಂಗ್ರೆಸ್ ಸಾಲ, ಪೂಜಾರಿ ಲೋನ್ ಅಂತ ಹಿಂತಿರುಗಿಸಲೊಲ್ಲದ ಸಾಲ ಪರಂಪರೆಯೇ ಇಂದಿಗೂ ಮುಂದುವರಿದಿಲ್ಲವೇ?) ಇಲ್ಲಿಯ ಸಂದರ್ಭ ಸಾಲದ ಅವಧಿ ತೀರಿದೆ. ಸಾಲಗಾರನಿಗೆ ಕೊಡುವ, ಹಿಂತಿರುಗಿಸುವ ಮನಸ್ಸು ಇಲ್ಲ ಅಥವಾ ಕೊಡುವ ಚೈತನ್ಯವಿಲ್ಲ. ಅವನ, (ಸಾಲಗಾರನ) ಋಣಿಯ ದೈನೇಸಿ ಸ್ಥಿತಿಯನ್ನು ಸರ್ವಜ್ಞ ಚಿತ್ರವತ್ತಾಗಿ ಕೊಟ್ಟಿದ್ದಾನೆ. .ಹಿಂತಿರುಗಿಸುವ ಉಪಾಯ ಇಲ್ಲವಾದರೆ, ಸಾಲ ಮಾಡಲೇಬೇಡಿ ಎಂಬುದೇ ಸಂದೇಶ ಅವಮಾನವಾಗುತ್ತದೆ, ಜಗಳವಾಗುತ್ತದೆ, ವಾಗ್ಯುದ್ಧದಲ್ಲಿ ನಿಲ್ಲದೆ ಕೈ ಕೈ ಮಿಲಾಯಿಸುವಲ್ಲಿಗೆ ತಲುಪುತ್ತದೆ. ಕೊಲೆಯಲ್ಲು ಕೊನೆಯಾಗಬಹುದು. ಕೊನೆಯಾಗುವುದೆಂತು? ಗುಂಪು ಘರ್ಷಣೆ, ಪಕ್ಷ ವಿಪಕ್ಷಗಳಾಗುತ್ತವೆ, ಗ್ರಾಮದ ಅಥವಾ ಊರಿನ ಶಾಂತಿ ಭಂಗವಾಗುತ್ತದೆ. ಸಾಲಗಾರನ ತೇಜೋವಧೆಯಾಗಿದೆ, ಮಾನಸಿಕ ಅಸ್ವಸ್ಥತೆಗೆ ದಾರಿಯಾಗಬಹುದು ಇದೊಂದು ಸಾರ್ವಕಾಲಿಕ ಸಮಸ್ಯೆ.

ಸಾಲದ ವ್ಯವಹಾರದ ಬಗ್ಗೆ ಒಂದು ನಾಡ ಗಾದೆ ಇದೆ ಕೊಟ್ಟವನು ಕೋಡಂಗಿ, ಈಸಿಕೊಂಡವನು ಈರಭದ್ರ.

ಸಾಲ ಪಡೆದ ಸಂದರ್ಭ-ಸಾಲ ಹಿಂತಿರುಗಿಸುವ ಸಂದರ್ಭ ಎರಡನ್ನು ಕವಿ ಎದುರು ಬದುರು ನಿಲ್ಲಿಸಿದ್ದಾನೆ. ರಾಘವಾಂಕ ಕವಿ ಸಿದ್ಧರಾಮ ಚಾರಿತ್ರ್ಯದಲ್ಲಿನ ಬಿಲ್ಲೇಶ ಬೊಮ್ಮಯ್ಯಯನು ವಾಗ್ವಾದ ನೋಡಬೇಕು. ಅವನು ಸಹ ಸಾಲ ಹಿಂತಿರುಗಿಸಲೊಲ್ಲದ ಭಂಡ. ವಚನಭ್ರಷ್ಟ ಸಾಲಗಾರನು ಸರ್ವನಾಶವಾಗುತ್ತಾನೆ. ಅವನಲ್ಲಿರುವ ಸಿರಿ ತೊಲಗುತ್ತದೆ, ಮತ್ತಷ್ಟು ದಾರಿದ್ರ್ಯ ಆವರಿಸಿಕೊಳ್ಳುತ್ತದೆ. ಅಲ್ಲದೆ ಸಾಲಗಾರನು ಸಾಲಿಗನ ತೊತ್ತಿನ ಮಗನಾಗುತ್ತಾನೆ ಎಂದು ಸರ್ವಜ್ಞ ಕವಿ ತೀರ್ಪು ಕೊಟ್ಟಿದ್ದಾನೆ, ಮತ್ತೊಂದು ವಚನದಲ್ಲಿ

ಬೆಂಡಿರದೆ ಮುಳುಗಿದರು, ಗುಂಡೆದ್ದು ತೇಲಿದರು
ಬಂಡಿಯಾ ನೊಗವು ಚಿಗಿತರು ಸಾಲಿಗನು
ಕೊಂಡದ್ದು ಕೊಡನು ಸರ್ವಜ್ಞ

ಸಾಲ ಪಡೆದುಕೊಂಡವನಿಂದ ಲೋಕದಲ್ಲಿ ಎಂಥ ಅಘಟಿತಗಳು ಘಟಿಸಬಹುದು. ಬೆಂಡು ನೀರಿನಲ್ಲಿ ಮುಳುಗಬಹುದು, ಕಲ್ಲುಗುಂಡು ಒಂದೊಮ್ಮೆ ಮುಳುಗಬಹುದು, ಬಂಡಿಯ ನೊಗ ಚಿಗುರಬಹುದು ಆದರೂ ಪಡೆದ ಸಾಲವನ್ನು ಸಾಲಗಾರ ಹಿಂತಿರುಗಿಸುವುದಿಲ್ಲ. ಇದು ಲೋಕದಲ್ಲಿ ಅಭ್ಯಾಸವಾಗಿಬಿಟ್ಟಿದೆ.

ಸಾಲ ಪಡೆದುಕೊಳ್ಳುವ ಸಂದರ್ಭದಲ್ಲಿ ಬೋರಾಡಿ, ಹಾರಾಡಿ ಪಡೆದು, ಹಿಂತಿರುಗಿಸುವ ಸಂದರ್ಭದಲ್ಲಿ ಬೊಬ್ಬೆಯಿಟ್ಟು, ಬೊಗಳಿ, ಸುಳ್ಳು ಹೇಳಿ ಇಲ್ಲ ಎಂದು ಕೈಯಾಡಿಸುತ್ತಾನೆ. ಸಾಲ ತಿಂದು ತೇಗಿ, ಹಿಂದಿರುಗಿಸುವ ಸಂದರ್ಭದಲ್ಲಿ ದೇಗುಲದ ಕಂಬದಂತೆ ನಿಲ್ಲುತ್ತಾನೆ. ಸಾಲಗಾರನು ನೂರು ಹಣ ಪಡೆದುಕೊಳ್ಳುವ ತನಕ ವಿನಯವಂತನಾಗಿದ್ದು ಸಾಲಿಗನು ಕೊಟ್ಟ ಹಣದಲ್ಲಿ ಮೂರನ್ನು ಕೇಳಿದರು ಮಣ್ಣು ತೂರಿ ಶಾಪ ಹಾಕಿ ರಂಪ ಮಾಡಿ ಪ್ರತಿಭಟಿಸುತ್ತಾನೆ.

ಕಡತಂದೆನಲ್ಲದೆ ಹಿಡಿಯೆ ಕದ್ದನೆ?
ಕಡವಲುರೆ ಬೈದು ತೆಗೆದಾನು ಸಾಲಿಗನು
ನಡುವೆ ಜಗಳವನು ಸರ್ವಜ್ಞ

ತಡೆದು ಕೊಟ್ಟ ಸಾಲ ಮರಳಿ ಕೇಳಿದರೆ ಯಾಕೆ ನನ್ನನ್ನು ಬಂದಿಸುತ್ತೀರಿ ನಾನು ಕದ್ದು ತಂದೆನೇ ಎಂದು ದಬಾಯಿಸಿ ಜಗಳ ತೆಗೆಯುತ್ತಾನೆ ಸಾಲಿಗನು. ಪಾಪ ಸಾಲವನ್ನು ಕೊಟ್ಟಾತ ಸಾಲ ವಸೂಲಿಯಾಗದೆ

ಉದ್ಧರಿಯ ಕೊಟ್ಟಣ್ಣ ಹದ್ದಾದ ಹಾವಾದ
ಎದ್ದೆದ್ದು ಬರುವ ನಾಯಾದ, ಹುತ್ತದ
ಗೊದ್ದದಂತಾದ ಸರ್ವಜ್ಞ

ಹದ್ದಿನಂತೆ ಎರಗಿದ, ಹಾವಿನಂತೆ ಹೆಡೆಬಿಚ್ಚಿದ, ನಾಯಂತೆ ಬೊಗಳಿದ, ಕೊನೆಗೆ ಸೋತು ಹುತ್ತದ ಗೊದ್ದದಂತೆ ಹರಿದಾಡಿದ. ಸಾಲ ಕೊಟ್ಟವನ ಬಣ್ಣವನ್ನು ಇದಕ್ಕಿಂತ ಚೆನ್ನಾಗಿ ವರ್ಣಿಸುವುದು ಕಷ್ಟ. ನಮ್ಮ ಚಂಪೂ ಕವಿಗಳು ಬರೆಯುವಂತೆ ಬಾರದ ಭವಂಗಳಲ್ಲಿ ಬಂದಂತಾಯಿತು ಸಾಲಕ್ಕೆ ಕಲ್ಲೆದೆಯು ಬೇಕು ಎಂದಿದ್ದಾನೆ. ಕೊಡುವುದಕ್ಕೂ ಪಡೆಯುವುದಕ್ಕೂ. ವಸೂಲಿಯ ಕಷ್ಟ ನೋಡಿದರೆ ಕವಿ ಕೊಟ್ಟವನ ಪರವಾಗಿಯೇ ಇರುವಂತಿದೆ. ಸಾಲ ಪಡೆದುಕೊಳ್ಳುವವನಿಗೂ ಒಂದೆರೆಡು ಕಿವಿಮಾತು ಹೇಳುತ್ತಾನೆ. ಸಾಲದ ವ್ಯವಹಾರದಲ್ಲಿ ನಂಬುಗೆ ಮುಖ್ಯ. ನಂಬುಗೆ ತಪ್ಪಿದರೆ ಸಾಲ ಹುಟ್ಟದು ಎಂದಿದ್ದಾನೆ.

ಬಡ್ಡಿಗೆ ಸಾಲ ತರುವವನ ಬಾಳ್ವೆ ಮೂರುಕಾಸಿಗೂ (ಅಡ್ಡ=ಎರಡು ಆಣೆ, ನಾಲ್ಕು ಪೈಸೆ) ಬೇಡ ಎಂದು ಬುದ್ದಿ ಹೇಳಿದ್ದಾನೆ.

ಅಡ್ಡ ಬಡ್ಡಿಯೂ ಹೊಲ್ಲ ಗಿಡ್ಡ ಬಾಗಿಲು ಹೊಲ್ಲ
ಹೆಡ್ಡರೊಡನಾಟ ತರವಲ್ಲ ಬಡಿಗ ತಾ
ನೊಡ್ಡನಿರಹೊಲ್ಲ ಸರ್ವಜ್ಞ

ಇದಕ್ಕೆ ಪಾಠಾಂತರವೂ ಇದೆ

ಅಡ್ಡ ಬಡ್ಡಿಯೂ ಹೊಲ್ಲ ಗಿಡ್ಡ ಬಾಗಿಲು ಹೊಲ್ಲ
ಹೆಡ್ಡರೊಡನಾಟ ಕರಹೊಲ್ಲ–ಬೋಡರಿಗೆ
ಲಡ್ಡುಗೆ ಹೊಲ್ಲ ಸರ್ವಜ್ಞ

ಇದು ಒಂದು ದಾಟಿ. ಹೊಲ್ಲದ್ದನ್ನೆಲ್ಲ ಒಂದು ಪಟ್ಟಿ ಮಾಡುವುದು, ದುಬಾರಿ ಬಡ್ಡಿ ಸಾಲ ಪಡೆಯಬೇಡ ಎಂದು ಸಲಹೆ ಕೊಡುತ್ತಿದ್ದಾನೆ. ಹಾಗೆಯೇ ಸಾಲ ಮಾಡುವವನಿಗೆ ಮತ್ತೊಂದೆರಡು ಸೂಚನೆಯಿದೆ, ವಿಚಾರಿಸಲು

ಇದ್ದೂರ ಸಾಲ ಹೇಗಿದ್ದರೂ ಕೊಡಬೇಡ
ಇದ್ದುದನು ಸೆಳೆದು ಸಾಲ ಕೊಟ್ಟವ ಗುದ್ದಿ
ಒದ್ದು ಕೇಳುವನು ಸರ್ವಜ್ಞ

ಇದು ಅನ್ಯಾಯವೇ, ಅನುಚಿತ ಸಲಹೆಯೇ ಇದಕ್ಕೆ ಬದಲಾಗಿ ಇದ್ದೂರಿನಲಿ ಸಾಲ ಮಾಡಿ, ಸಾಲ ತೀರಿಸಿ ಮರ್ಯಾದೆ ಉಳಿಸಿಕೊ ಎಂದು ಭೋದಿಸಬೇಕಾಗಿತ್ತು. ಗುರುಗಳಿಂದ ನಾವು ನಿರೀಕ್ಷಿಸುವುದು ಏನನ್ನು?

ಈ ವಚನಕ್ಕೆ ಪೂರಕ ಎಂಬಂತೆ ಬೇರೂರ ಸಾಲವನ್ನು ನೂರನಾದರು ಕೊಳ್ಳು ಅವನು ಮೂರು ವರ್ಷ ತಿರುಗಾಡಿ ಹೋಗುತ್ತಾನೆ ಎನ್ನುತ್ತಾನೆ – ಇದು ದುರ್ಬೋಧೆ. ಸಂತನಿಂದ ಸಮಾಜ ಸುಧಾರಕನಿಂದ ಇಂತಹ ಉಪದೇಶ ನಾವು ನಿರೀಕ್ಷಿಸುವುದಿಲ್ಲ. ಒಟ್ಟಿನಲ್ಲಿ ಸಾಲದ ಬಗ್ಗೆ ಅವನ ಅಭಿಪ್ರಾಯಗಳನ್ನು ಸಂಗ್ರಹಿಸಿದರೆ ಸಾಲ ಪಡೆದವರು ಕೊಡಲಾರದೆ ಬನ್ನ ಪಡುವುದನ್ನು, ಕೊಟ್ಟವನು ಪರಿತಪಿಸುವುದನ್ನು ವರ್ಣಿಸಿ,

ಸಾಲವಿಲ್ಲದವನ ಮನೆಲೇಸು ಎಂದು ತೀರ್ಪು ಕೊಟ್ಟಿದ್ದಾನೆ

ಹಾಲು ಬೋನವು ಲೇಸು ಮಾಲೆ ಕೊರಳಿಗೆ ಲೇಸು
ಸಾಲವಿಲ್ಲದವನ ಮನೆ ಲೇಸು ಬಾಲರ
ಲೀಲೆ ಲೇಸೆಂದ ಸರ್ವಜ್ಞ

(ಟಿಪ್ಪಣಿ : ಸಾಲಿಗ, ಸಾಲಗಾರ ಎರಡು ತದ್ಧಿತಾಂತಗಳಿವೆ ಕನ್ನಡದಲ್ಲಿ)

ಈ ಎರಡು ಶಬ್ದಗಳನ್ನು ಒಂದೇ ಅರ್ಥದಲ್ಲಿ ಸಾಲದಲ್ಲಿ ವ್ಯವಹರಿಸುವವನು, ಅಂದರೆ ಸಾಂದರ್ಭಿಕವಾಗಿ ಕೊಟ್ಟವನು, ಪಡೆದವನು ಎಂದು ಅರ್ಥವಾಗುತ್ತದೆ. ಸರ್ವಜ್ಞನೇ ಸಾಲಿಗ ಎಂಬ ಪದವನ್ನು ಕೊಟ್ಟವನು ಎಂತಲೂ, ಪಡೆದವನೂ ಎಂತಲೂ ಬಳಸಿದ್ದಾನೆ. ಅರ್ಥಕೋಶಗಳಲ್ಲಿ ಸ್ಪಷ್ಟಸೂಚನೆಗಳಿಲ್ಲ.

ಸಾಲಿಗರು ಬಂದು ಎಳೆವಾಗ ಎಂಬಲ್ಲಿ ಸಾಲ ಕೊಟ್ಟವನು ಎಂಬ ಅರ್ಥ ಖಚಿತವಾಗಿದೆ. ಎರಡು ಶಬ್ದಗಳಿರುವುದರಿಂದ ಋಣಿಯನ್ನು ಸಾಲಿಗ ಎಂದು ಕೊಟ್ಟವನನ್ನು ಸಾಲಗಾರ ಎಂದು ಸೂಚಿಸಬಹುದೇ?

**೩.೯ ಸರ್ವಜ್ಞನ ವಚನಗಳಲ್ಲಿ ಜಾತಿ/ಕುಲ/ವರ್ಣ**

ಭಾರತೀಯ ಭವ್ಯಸಂಸ್ಕೃತಿಯಲ್ಲಿ ಮಾನವವಿರೋಧಿ ಚಿಂತನೆಗಳು, ಮನುಕುಲವನ್ನು ಹುಟ್ಟಿನಿಂದ ಬೇರ್ಪಡಿಸಿ ತರತಮಗಳನ್ನು ಗುರುತಿಸಿರುವುದನ್ನು ಕಾಣುತ್ತೇವೆ. ವೈದಿಕ ಧರ್ಮದ ಬುನಾದಿಯೇ ವರ್ಣಾಶ್ರಮ ವ್ಯವಸ್ಥೆ. ಅದನ್ನು ಸಮರ್ಥಿಸುವ ದುರ್ಬಲ ಪ್ರಯತ್ನಗಳು ಇಂದಿಗೂ ಮುಂದುವರೆದಿದ್ದರೂ ಅವು ಇಂದು ನಗೆಪಾಟಲಾಗಿವೆ. ಪ್ರತಿಗಾಮಿ ಧೋರಣೆ ಎಂದು ಭಾವಿಸಲಾಗಿದೆ.

ಗೌತಮ ಬುದ್ಧ ವರ್ಣಾಶ್ರಮ ಪದ್ಧತಿಯನ್ನು ವಿರೋಧಿಸಿದ. ಬಸವಾದಿ ಶಿವಶರಣರು ಐತಿಹಾಸಿಕ ಕ್ರಾಂತಿಯನ್ನೇ ಮಾಡಿದರು. ಶರಣ ಸಂಸ್ಕೃತಿಯ ಉಪಾಧೇಯ ಅಂಶಗಳನ್ನು ಸ್ವೀಕರಿಸಿ ವೀರಶೈವ ದೀಕ್ಷೆ ಪಡೆದಿರಬಹುದಾದ ಸರ್ವಜ್ಞನು ಜಾತಿ ಮತಗಳ ವಿಚಾರದಲ್ಲಿ ಆಸಕ್ತನಲ್ಲ. ಎಲ್ಲಾ ಉಪಾಧಿಗಳನ್ನು ಮೀರುವುದೇ ಅವನ ಸಂಕಲ್ಪ. ಹಿಂಡನಗಲಿದ ಗಜ ಅವನು ಸಾಂದರ್ಭಿಕವಾಗಿ ಹಾಗೂ ತಾತ್ವಿಕವಾಗಿ ಒಪ್ಪಿ ಪ್ರತಿಪಾದಿಸಿದ್ದು ಮತನಿರಪೇಕ್ಷಕ ಧರ್ಮ.

ಅವನ ಸ್ಪಷ್ಟವಾದ, ಖಚಿತವಾದ ಅಭಿಪ್ರಾಯಗಳು ಗುಂಡಿನಂತೆ, ತೊಟ್ಟ ಬಾಣದಂತೆ ನೇರ ಬಂದು ತಾಕುತ್ತದೆ.

ಹೊಲಸು ಮಾಂಸದ ಹುತ್ತು ಎಲುವಿನ ಹಂಜರವು
ಹೊಲೆ ಬಲಿದ ತನುವಿನೊಳಗಿರ್ದು ಮತ್ತದರ
ಕುಲವನೆಣಿಸುವರೆ ಸರ್ವಜ್ಞ.

ಎಲ್ಲ ಮಾನವದೇಹ ರಕ್ತ ಮಾಂಸ, ಎಲುಬು, ಕೊಳೆ, ಹೊಲೆಗಳಿಂದ ತುಂಬಿದೆ. ಇದು ಸರ್ವಸಮಾನ. ಇಲ್ಲಿ ಎಂಥ ಕುಲಭೇದ? ಇದೇ ಅಭಿಪ್ರಾಯವನ್ನು ಈ ಕೆಳಗಿನ ವಚನ ವ್ಯಾಖ್ಯಾನಿಸಿ ವಿವರಿಸುತ್ತದೆ.

ಎಲುವಿನ ಕಾಯಕ್ಕೆ ಸಲೆಚರ್ಮವನು ಹೊದಿಸಿ
ಮಲಮೂತ್ರ ಕ್ರಿಮಿಯು ಒಳಗಿರ್ಪ ದೇಹಕ್ಕೆ
ಕುಲವಾವುದಯ್ಯ ಸರ್ವಜ್ಞ.

ಆದರೆ ಸಮಾಜದಲ್ಲಿ ಕೆಲವು ಜಾತಿವಾಚಕಗಳಿದ್ದು ಅವರನ್ನು ಗುರುತಿಸುತ್ತಿದ್ದರಲ್ಲವೆ? ಎಂದರೆ

ಭೂತೇಶ ಶರಣೆಂಬ ಜಾತಿಮಾದಿಗನಲ್ಲ
ಜಾತಿಯಲ್ಲಿ ಹುಟ್ಟಿ ಭೂತೇಶ ಶರಣೆನ್ನ
ದಾತ ಮಾದಿಗನು ಸರ್ವಜ್ಞ

ಆ ಜಾತಿವಾಚಕಗಳಿಗೆ ಹೊಸ ಅರ್ಥ ಕಲ್ಪಿಸುತ್ತಿದ್ದಾನೆ.

ಕುಲಗೆಟ್ಟವರ ಚಿಂತೆಯೊಳಗಿರ್ಪರಂತೆಲ್ಲ
ಕುಲಗೆಟ್ಟು ಶಿವನ ಮರೆಹೊಕ್ಕ ಋಷಿಗಳು
ಕುಲಗೋತ್ರರುಗಳು ಸರ್ವಜ್ಞ

ನಿಜವಾದ ಕುಲಜರು, ಗೋತ್ರಸಮುದ್ಭವರು ಯಾರು ಎಂದರೆ ಕುಲಗೆಟ್ಟು ಶಿವನ ಮೊರೆ ಹೊಕ್ಕ ಋಷಿಗಳು. ವೈದಿಕ ಚಿಂತನೆಯ, ಭೇದ ಬುದ್ಧಿಯ ಅಲ್ಪರಿಗೆ, ಕುಬ್ಜರಿಗೆ, ಕೂಪಮಂಡೂಕಗಳಿಗೆ ಮುಟ್ಟಿನೋಡಿಕೊಳ್ಳುವಂತಿದೆ ಈ ವಚನ. ಸರ್ವಜ್ಞನ ಅತ್ಯುತ್ತಮ ವಚನಗಳಲ್ಲಿ ಇದೂ ಒಂದು. ಚಿಂತನಾಂಶ, ತರ್ಕಶುದ್ಧತೆ, ಅಭಿವ್ಯಕ್ತಿಯಲ್ಲಿ ಧನ್ಯತೆ ಈ ವಚನದ ವೈಶಿಷ್ಟ್ಯ:

ನಡೆವುದೊಂದೆ ಭೂಮಿ ಕುಡಿವುದೊಂದೇ ನೀರು
ಸುಡುವಗ್ನಿಯೊಂದೆ ಇರುತಿರಲು ಕುಲಗೋತ್ರ
ನಡುವೆ ಎತ್ತಣದು ಸರ್ವಜ್ಞ

ಮುಂದುವರಿದು, ತನ್ನ ಆಲೋಚನಾಲಹರಿಗಳನ್ನು ಸರಾಗವಾಗಿ ಹರಿಯಬಿಟ್ಟಿದ್ದಾನೆ. ಇದು ಹಿಂಡನಗಲಿದ ಗಜಕ್ಕೆ ಮಾತ್ರ ಸಹಜ.

ಅವಯವಗಳೆಲ್ಲರಿಗೆ ಸಮನಾಗಿ ಇರುತಿರಲು
ಭವಿಭಕ್ತ ಶ್ವಪಚಶೂದ್ರರಿವರಿಂತೆಂಬ
ಕವನವೆತ್ತಣರು ಸರ್ವಜ್ಞ
ಭವಿ–ಭಕ್ತ; ಶ್ವಪಚ–ಶೂದ್ರ ಎಂಬ ಭೇದವನ್ನೂ ಸಹ ಮಾನ್ಯ ಮಾಡದ ಧೀರ ಅವನು

ಕುಲವಿಲ್ಲ ಯೋಗಿಗೆ ಛಲವಿಲ್ಲ ಜ್ಞಾನಿಗೆ
ತೊಲೆಕಂಬವಿಲ್ಲ ಗಗನಕ್ಕೆ ಸ್ವರ್ಗದಲಿ
ಹೊಲಗೇರಿಯಿಲ್ಲ ಸರ್ವಜ್ಞ

ಹೊಲಗೇರಿ, ಬ್ರಾಹ್ಮಣಗೇರಿ, ವೈಶ್ಯಗೇರಿ ಇದು ಮಾನವಕೃತ, ಕೃತಕ ವಿಂಗಡನೆ ಸ್ವರ್ಗದಲ್ಲಿ ಹೊಲಗೇರಿ ಇಲ್ಲ, ಎಲ್ಲ ಸಮ – ಗಟ್ಟಿಯಾದ, ಬದ್ಧವಾದ ನಿಲುವು; ರಾಜಿಗೆ, ದಾಕ್ಷಿಣ್ಯಕ್ಕೆ ಆಸ್ಪದವೇ ಇಲ್ಲ.

ಜಾತಿ ವಿಂಗಡನೆಯನ್ನು ಇವನಷ್ಟು ಖಂಡಿಸಿದ, ಸಮಾನತೆಯನ್ನು ಸಾರಿದ, ಎತ್ತಿಹಿಡಿದ, ಪ್ರತಿಪಾದಿಸಿದ, ಮತ್ತೊಬ್ಬ ತತ್ವನೇತ್ರ ಬಹುಶಃ ಇಲ್ಲ.

ಮುಟ್ಟಾದ ಹೊಲೆಯೊಳಗೆ ಹುಟ್ಟಿಹುದು ಜಗವೆಲ್ಲ
ಮುಟ್ಟಬೇಡೆಂದು ತೊಲಗುವ ಹಾರುವನು
ಹುಟ್ಟಿದನು ಎಲ್ಲಿ? ಸರ್ವಜ್ಞ

ಸಾಂಪ್ರದಾಯಕವಾದ ಪಟ್ಟಭದ್ರ ಹಿತಾಸಕ್ತಿಗಳನ್ನು ಇವನಂತೆ ಝಂಕಿಸಿ ಕೇಳಿದವರು ಮತ್ತೊಬ್ಬರಿಲ್ಲ. ವೇದೋಕ್ತ, ಶಾಸ್ತ್ರೋಕ್ತ ಎಂದು ಬುರುಡೆ ಬಿಡುವವರನ್ನು ಹಿಡಿದು ಅಲ್ಲಾಡಿಸುತ್ತಿದ್ದಾನೆ.

ಜಾತಿಹೀನರ ಮನೆಯ ಜೋತಿ ತಾಹೀನವೆ?
ಜಾತಿವಿಜಾತಿ ಎನಬೇಡ ದೇವನೊಲಿ
ದಾತನೇ ಜಾತ ಸರ್ವಜ್ಞ

ಇವನ ವಿಚಾರಗಳು ಸಾಧಾರವಾಗಿವೆ, ಪ್ರತ್ಯಕ್ಷ ಇವೆ, ಬರಿನಂಬಿಕೆಯ, ಶ್ರದ್ದೆಯ ಮಾತಲ್ಲ. ದೀಪ ಎಲ್ಲಾ ಮನೆಯಲ್ಲು ಏಕ ಪ್ರಕಾರವಾಗಿ ಬೆಳಗುತ್ತದೆ. ಅದು ಪ್ರಾಕೃತಿಕ ಶಕ್ತಿ, ಸೂರ್ಯ ಚಂದ್ರ, ವಾಯುಮಂಡಲದಂತೆ.

ಇವನ ಮೇಲಿನ ಮಾತು ಜನಪದವೇದವಾಗಿದೆ. ಜನಪದರನ್ನು ಮುಟ್ಟಿದೆ, ತಟ್ಟಿದೆ, ಎಬ್ಬಿಸಿದೆ, ಕೈಹಿಡಿದು ನಡೆಸಿದೆ. ಈತನ ಸಮದರ್ಶಿತ್ವ ಅಮೋಘವಾಗಿದೆ. ನ್ಯಾಯಪರತೆ, ಸತ್ಯಪಕ್ಷಪಾತ, ಅನುಕರಣೀಯ, ಮಾನ್ಯ

ಉತ್ತಮರನು ಅವರ ಭೇದ ಬುದ್ದಿಗಾಗಿ, ಸಮಾಜವನ್ನು ಸೀಳಿದ್ದಕ್ಕಾಗಿ ಅವನು ಖಂಡಿಸಿದರೂ,

ಕೆಟ್ಟರೆ ದ್ವಿಜನಿಂದ ಕೆಟ್ಟವರು ಇನ್ನಿಲ್ಲ
ಕೆಟ್ಟದನ್ನು ಬಿಟ್ಟು ನಡೆದರೆ ಅವರಿಂದ
ನೆಟ್ಟನವರಿಲ್ಲ ಸರ್ವಜ್ಞ

ಎಂದು ತೂಕದ ಮಾತನ್ನು ಆಡಲು ಅವನು ಹಿಂಜರಿಯುವುದಿಲ್ಲ.

ಅವನ ಹೇಳಿಕೆಗಳಲ್ಲಿ ಅನೇಕ ವಿರೋಧಾಭಾಸಗಳು ಇವೆ. ಅವುಗಳು ಹೇಗೆ ಸೇರಿಕೊಂಡವು? ಅವು ಯಾರವು? ಎಂಬ ಸೂಕ್ಷ್ಮ ಸಂಶೋಧನೆಗೆ ಇನ್ನು ವಿಪುಲ ಅವಕಾಶವಿದೆ ಎಂದು ಇಲ್ಲಿ ಸೂಚಿಸಬಹುದು.

### ೩.೧೦ ಸರ್ವಜ್ಞನ ವಚನಗಳಲ್ಲಿ ಸಜ್ಜನರಸಂಗ

ವ್ಯಕ್ತಿಯ ಅಂತರಂಗ ಬಹಿರಂಗ ಬೆಳವಣಿಗೆಗೆ, ಬೌದ್ಧಿಕ ವಿಕಾಸಕ್ಕೆ ಅನೇಕ ಅಂಶಗಳು ಕಾರಣವಾಗುತ್ತವೆ, ಪ್ರೇರಣೆ ನೀಡುತ್ತವೆ. ವಂಶವಾಹಿ ತಂತುಗಳು, ಕುಟುಂಬದ ಪರಿಸರ, ನೆರೆಹೊರೆಯ ಸಂಪರ್ಕ, ಶಾಸ್ತ್ರಾಭ್ಯಾಸ, ಗುರುಬೋಧೆ, ನಿಸರ್ಗ, ಸಹಪಾಠಿಗಳು, ದೇಶಪರ್ಯಟನ, (ಕೋಶ ಓದು, ದೇಶಸುತ್ತು ಎಂಬ ಗಾದೆಯೇ ಇದೆಯಲ್ಲ!) ಜೀವನದಲ್ಲಿ ಎದುರಾದ ವಿಪ್ಲವಗಳು, – ಹೀಗೆ ಅನೇಕ ಅಂಶಗಳು ವ್ಯಕ್ತಿಯನ್ನು ರೂಪಿಸುತ್ತವೆ, ಸಂಸ್ಕರಿಸುತ್ತವೆ. ವ್ಯಕ್ತಿಯ ವಿಕಾಸವೆಂದರೆ ಅದು ಏಕಪ್ರಕಾರವಲ್ಲ ಬರಿ ಊರ್ಧ್ವಮುಖವಲ್ಲ; ಇರುವುದನ್ನು ಬಿಡುವ, ಬಿಟ್ಟಿದ್ದನ್ನು ಮತ್ತೆ ಹೊಸ ಬೆಳಕಿನಲ್ಲಿ ಆಯ್ದು ಸ್ವೀಕರಿಸುವ ನಿರಂತರ ಪ್ರಕ್ರಿಯೆ.

ಜೀವನದಲ್ಲಿ ಲಭ್ಯವಾದ ಸಜ್ಜನರಸಂಗವು ಅಂಥ ಒಂದು ಸವಲತ್ತು, ಸಂಪತ್ತು

ಸಜ್ಜನರ ಸಂಗವದು ಹೆಜ್ಜೇನು ಕೊಡದಂತೆ
ದುರ್ಜನರ ಸಂಗದೊಡನಾಟ ಬಚ್ಚಲಿನ
ರೊಚ್ಚಿನಂತಿಹುದು ಸರ್ವಜ್ಞ.

ಸಜ್ಜನರ ಸಹವಾಸ ಜೇನು ಸವಿದಂತೆ ಸಿಹಿ, ಉದರಕ್ಕೂ, ಅಧರಕ್ಕೂ. ಜೇನಿಗೆ ಔಷಧೀಯ ಗುಣವಿದೆ. ಸಜ್ಜನರ ಸಹವಾಸದಲ್ಲಿರುವುದರಿಂದ ಅವರ ನಡತೆ, ಮಾತು ವರ್ತನೆಗಳನ್ನು ಭಾವಿಸಿ ಪರಿಭಾವಿಸಿ ನಾವೇ ಕಲಿಯುತ್ತೇವೆ. ಸಜ್ಜನರು ತಮ್ಮ ಅನುಭವಾಮೃತವನ್ನು ಧಾರೆಯೆರೆಯುತ್ತಾರೆ. ಸಜ್ಜನರು ಎಂಬ ಗರ್ವವನ್ನು ಕಲ್ಪಿಸಿಕೊಳ್ಳುತ್ತಿದ್ದಂತೆಯೇ ಅವರಿಂದ ಭಿನ್ನವಾದ ಮತ್ತೊಂದು ವರ್ಗ ಸಮನಾಂತರವಾಗಿ ಸಮ ದೂರದಲ್ಲಿ ಸಮ ಪ್ರಮಾಣದಲ್ಲಿ ಇರುವ ಸಾಧ್ಯತೆಯನ್ನು ಒಪ್ಪಿಕೊಂಡಂತೆಯೇ. ದುರ್ಜನರನ್ನು ಕಂಡಾಗ, ಗಮನಿಸಿದಾಗ, ಸಜ್ಜನರ ಹೆಚ್ಚುಗಾರಿಕೆ, ಗುಣ ವಿಶೇಷ ಮತ್ತಷ್ಟು ಸ್ಪಷ್ಟವಾಗುತ್ತದೆ.

ಲೋಕದಲ್ಲಿ ತುಲನೆಯಿಂದ, ಸಾಪೇಕ್ಷವಾಗಿ ವಸ್ತುವಿನ ಬೆಲೆ ನಿರ್ಧಾರವಾಗುತ್ತದೆ. ಅದು ಬಚ್ಚಲಿನ ರೊಚ್ಚೆ, ಮನಸ್ಸಿಗೆ ನೋವು, ಅಸಹ್ಯವುಂಟುಮಾಡುತ್ತದೆ. ಬಚ್ಚಲಿನ ರೊಚ್ಚೆಯಲ್ಲಿ ಆಕಸ್ಮಿಕವಾಗಿ ಕಾಲು ಅದ್ದಿದರೆ, ಬೇಗ ಅಲ್ಲಿಂದ ಪಾರಾಗಿ ಕಾಲು ತೊಳೆದುಕೊಳ್ಳಬೇಕೆನಿಸುತ್ತದೆ. ಕ್ರಿಮಿಕೀಟಾದಿಗಳಿಂದ ಅದು ರೋಗಕಾರಕ, ಅಂಟುರೋಗವೋ, ಸಾಂಕ್ರಾಮಿಕ ಚರ್ಮ ರೋಗವೋ ತಗಲೀತು!

ಸತ್ಯರನುಡಿ ತೀರ್ಥ ನಿತ್ಯರ ನಡೆತೀರ್ಥ
ಉತ್ತಮರ ಸಂಗವದುತೀರ್ಥ ಹರಿವನೀ
ರೆತ್ತಣದುತೀರ್ಥ ಸರ್ವಜ್ಞ.

ಸಜ್ಜನರು ಸತ್ಯವಂತರಾಗಿರುತ್ತಾರೆ, ಅವರಲ್ಲಿ ಕಪಟ, ಒಳಗೊಂದು, ಹೊರಗೊಂದು ಇರದು. ಅವರು ತಮ್ಮ ಶೀಲದಿಂದಾಗಿ ಶಾಶ್ವತವಾಗಿ ಬಾಳುತ್ತಾರೆ. ಅವರ ಸಂಪರ್ಕವೇ ತೀರ್ಥ. ತೀರ್ಥವೆಂದರೆ ನಮ್ಮನ್ನು ಕರ್ಮದಿಂದ, ಪಾಪದಿಂದ, ಭವದಿಂದ ದಾಟಿಸುವ ಶಕ್ತಿಯುಳ್ಳದ್ದು. ಈ ಸತ್ಯವಂತರ ನಡೆನುಡಿ ನಮ್ಮನ್ನು ಕಾಪಾಡುವ ತೀರ್ಥ. ಇವರ ಎದುರಿಗೆ, ಹರಿವ ನೀರು ಸಹ ತೀರ್ಥವಲ್ಲ ನದಿಗಿಂತಲೂ ಘನಮಹಿಮರು ಈ ಸಜ್ಜನರು.

ಸತ್ಯವಂತರ ನೀನು ಸತ್ತರೆಂದನಬೇಡ
ಹೆತ್ತಮ್ಮ ಮಗನ ಕರೆವಂತೆ ನಿನ್ನನವ
ರೆತ್ತಿಕೊಂಬುವರು ಸರ್ವಜ್ಞ

ಸತ್ಯವಂತರು ಸತ್ತಂತೆ ಮೌನವಾಗಿರಬಹುದು. ಹೆಚ್ಚು ಆವುಟ, ಆರ್ಭಟ ಅವರದಲ್ಲ. ಆದರೆ ನಿನ್ನ ಆಸಕ್ತಿಗೆ ಒದಗುವ ಮಾತೃವಾತ್ಸಲ್ಯ ಅವರದು. ಹೆತ್ತಮ್ಮ ಮಗನ ಎತ್ತಿಕೊಂಬಂತೆ ನಿನ್ನನ್ನು ಸಕಾಲದಲ್ಲಿ ರಕ್ಷಿಸುವರು.

ಸಜ್ಜನರಲ್ಲಿರಬಹುದಾದ ಕೋಪ, ಅಸಹನೆ ಮೊದಲಾದ ಡೊಂಕನ್ನು ನೋಡಿ ಅಸಹನೆಬೇಡ. ಬಾಳೆಯ ಹಣ್ಣು ಡೊಂಕಾಗಿದ್ದರೂ ಸವಿಯಿಪ್ಪಂತೆ ಅವರ ಅಂತರಂಗದಲ್ಲಿ ಮಧು ಇದೆ, ಸದ್ಭಾವ, ಸದಾಲೋಚನೆ, ಸದಾಶಯವಿದೆ. ಬಲ್ಲವರ ಒಡನಾಟ ಬೆಲ್ಲವನು ಮೆದ್ದಂತೆ ಸಿಹಿ. ಜ್ಞಾನಿಗಳು, ಅರಿವಾಳಿಗಳು, ಅವರ ಸಹವಾಸವೇ ಸುಖಪ್ರದ, ಕಲ್ಯಾಣಕಾರಕ. ಆದರೆ ಸಲ್ಲದ್ದನ್ನು ಅಯೋಗ್ಯವಾದುದನ್ನು ಯೋಗ್ಯವೆನ್ನುವ ಅಜ್ಞಾನಿಯ, ತಿಳಿಗೇಡಿಯ ಸಂಗ ಕಲ್ಲು ಬಂಡೆಗೆ ತಲೆ ಚಚ್ಚಿಕೊಂಡಂತೆ ನೋವು, ಭಂಗ. ಇಲ್ಲಿ ತೌಲನಿಕವಾಗಿ ತೂಗಿ ನೋಡಲಾಗಿದೆ, ಜ್ಞಾನಿಗೂ ಅಜ್ಞಾನಿಗು ಇರುವ ವ್ಯತ್ಯಾಸವನ್ನು.

ಮಾನಹೀನರ ಸಂಗವೇನು ಕೊಟ್ಟರೂ ಬೇಡ
ಮಾನವುಳ್ಳವರ ಸಂಗತಾ ಸಕ್ಕರೆಯ
ಜೇನ ಸವಿದಂತೆ ಸರ್ವಜ್ಞ

ಮಾನವಂತರನ್ನು ಮಾನಹೀನರೊಡನೆ ಹೋಲಿಸಿ ನೋಡಲಾಗಿದೆ. ಒಂದು ತ್ಯಾಜ್ಯ, ಮತ್ತೊಂದು ಜೇನ ಸವಿದಂತೆ ಸ್ವೀಕಾರಯೋಗ್ಯ.

ಸಜ್ಜನರಿಂದ ನಾವು ಕಲಿಯಬೇಕಾದ ಕೌಶಲವೆಂದರೆ ಇದೇ ನೋಡಿ. ಲೋಕದಲ್ಲಿ ದುರ್ಜನರನ್ನು, ದುಷ್ಟರನ್ನು ಸಮೂಲ ನಾಶಾಮಾಡಲಾಗದು. ಅವರ ನಡುವೆಯೇ ನಾವು ಬದುಕಬೇಕು, ಹೇಗೆ? ಸಜ್ಜನರನ್ನು ನೋಡಿ ಕಲಿಯಿರಿ.

ಬಾಯಲ್ಲಿ ದಂತಪಂಕ್ತಿಯ ನಡುವೆ ಓಡಾಡುವ ನಾಲಗೆ ಘಾಸಿಗೊಳ್ಳದೆ ಉಪಾಯವಾಗಿ ಪಾರಾಗುವ ರೀತಿಯಲ್ಲಿ ಸಜ್ಜನರು ದುರ್ಜನರ ನಡುವೆ ಇದ್ದು ಅವರ ಆಘಾತಕ್ಕೆ ಸಿಗುವುದಿಲ್ಲ. ನಾವು ಈ ಕೌಶಲವನ್ನು ಸಜ್ಜನರಿಂದ ನೋಡಿ ಕಲಿಯಬೇಕು, ತಿಳಿಯಬೇಕು.

ಒಬ್ಬಕಳ್ಳ ಸತ್ಸಂಗಕ್ಕೆ ಸೇರಿದರೆ ಸಜ್ಜನನಾಗಿ ಮಾರ್ಪಾಡಾಗುತ್ತಾನೆ.
ಒಬ್ಬ ಸಜ್ಜನ ಕಳ್ಳರ ಸಮಾಜವನ್ನು ಹೊಕ್ಕರೆ ಸಜ್ಜನನೂ ಕಳ್ಳನೇ ಆಗುತ್ತಾನೆ.

ಸಮಾಜದಲ್ಲಿ, ಸಂಘದಲ್ಲಿ ಅಪಾರ ಶಕ್ತಿ ಇರುತ್ತದೆ: ವ್ಯಷ್ಟಿ ಸಮಷ್ಟಿಯಲ್ಲಿ ಕರಗಿ ಹೋಗುತ್ತದೆ. ಸಜ್ಜನರ ಸಂಗವನ್ನು ಅಪೇಕ್ಷಿಸುವಂತೆಯೇ ದುರ್ಜನರ ಸಂಗವನ್ನು ಉಪೇಕ್ಷಿಸಬೇಕು. ದುರ್ಜನರು ವೇಷಭೂಷಣಗಳಲ್ಲಿ, ತೋರಿಕೆಯ ಬಾಹ್ಯಾಡಂಬರರಲ್ಲಿ ಆಕರ್ಷಕರಾಗಿರುತ್ತಾರೆ. ಹೊರಗೆ ಕೆಂಪಾಗಿರುವ ಇಟ್ಟಿಯ ಹಣ್ಣು ಅಂತರಂಗದಲ್ಲಿ ವಿಷಪೂರಿತ. ಮೇಲೆ ಥಳಕು, ಒಳಗೆ ಹುಳುಕು ಎಂಬಂತೆ.

ಕೊನೆಗೆ ಇದು ವ್ರತ, ಪಾಲಿಸಿರಿ.

ಏನಾದರೂ ಕೊಟ್ಟು ಜ್ಞಾನಿಯ ಕೆಳೆಕೊಳ್ಳು
ಜ್ಞಾನಹೀನನ ಕೆಳಗೊಂದು ಪಣವನ್ನು
ನೀನಿತ್ತು ಕಳುಹು ಸರ್ವಜ್ಞ (ಕೆಳೆ = ಗೆಳೆತನ)

ಸಂಕಷ್ಟದಲ್ಲಿ ಅಭಯವಿತ್ತು. ನಮ್ಮ ಕೆಟ್ಟ ಕಾರ್ಯವನ್ನು ಪರಿಷ್ಕರಿಸುವವನೆ ಸಜ್ಜನ.

ಮುಟ್ಟಿದೆಡರಿಗೆ ಅಭಯ ಕೊಟ್ಟಾತ ದಾತಾರ

ಕೆಟ್ಟಕಾರ್ಯವನ್ನು ತಿದ್ದಿದರೆ ಅವನೊಂದು
ನೆಟ್ಟನೆ ದೈವ ಸರ್ವಜ್ಞ
ಪ್ರಭು, ಒಡೆಯ, ದೈವ ಎಂದು ಯಾರನ್ನು ಕರೆಯಬಹುದು?

ಆಪತ್ತೆಸಗಿದಾಗಲೇ ಹಗೆಯ ಗೆಲುವುದು ವಸುಮತೀಶರ ನೀತಿ ಎಂದು ರಾಜನೀತಿಯ ಪಾಠವಾದರೆ, ಸಜ್ಜನಿಕೆಯ ಪಾಠವೇ ಬೇರೆ.

ಘಟಿಸಿದ, ಸಂಭವಿಸಿದ, ವಕ್ರಿಸಿದ ಆಘಾತದಲ್ಲಿ ಅಭಯ ಪ್ರಧಾನ ಮಾಡಿ, ಧೈರ್ಯ ತುಂಬಿ. ಭಂಗವಾದ ಕಾರ್ಯವನ್ನು ಸರಿಪಡಿಸಿದನೆಂದರೆ, ಮಾರ್ಗದರ್ಶನ ಮಾಡಿದರೆ ಅವನೇ ದೈವ, ಒಡೆಯ.

ಸಜ್ಜನನು ರಸಿಕನಾಗಿರುತ್ತಾನೆ. ರಸಿಕನೆಂದರೆ ರಸಜ್ಞ. ನವರಸದ ಅನುಭವವುಳ್ಳವನು ಎಂದು ಅರ್ಥ.

ರಸಿಕನಾಡಿದ ಮಾತು ಶಶಿಯುದಿಸಿಬಂದಂತೆ
ರಸಿಕನಲ್ಲದನ ಬರಿ ಮಾತು ಕಿವಿಗೆ ಕೂ
ರ್ದಸಿಯ ಬಡಿದಂತೆ ಸರ್ವಜ್ಞ

ಸರ್ವಜ್ಞನನೂ, ಸಂಭಾವಿತನೂ ರಸತಜ್ಞನೂ ಆದವನ ಮಾತು ಚಂದ್ರೋದಯದಂತೆ ಆಪ್ಯಾಯಮಾನ. ರಸಜ್ಞನಲ್ಲದವನ ಶುಷ್ಕಮಾತು ಕಿವಿಗೆ ಹರಿತವಾದ ಬೆಣೆಯನ್ನು ಗಟ್ಟಿಸಿದಂತೆ, ಅಸುಖ, ಹಿಂಸೆ.

ಹೀಗೆ ಸರ್ವಜ್ಞನು ಸಜ್ಜನನನ್ನು, ಅವನ ಸಹವಾಸವನ್ನು, ಅದರ ಲಾಭವನ್ನು ವಿವರಿಸಿ, ದುರ್ಜನರನ್ನು ದೂರ ಮಾಡಿ ಎಂದು ಕಳಕಳಿಯಿಂದ ಕೇಳಿಕೊಳ್ಳುತ್ತಾನೆ.

**ಅಡಿಟಿಪ್ಪಣಿಗಳು:**

೧. ಸರ್ವಜ್ಞನ ಜೀವನ ಕೃತಿಗಳು ಹಾಗೂ ಸಂದೇಶಗಳು, ಡಾ।। ಬಿ.ಕೆ.ಹೊಸಮಠ, ಶ್ರೀ ಜಗದ್ಗುರು ಅನ್ನದಾನೀಶ್ವರ ಸಂಸ್ಥಾನ ಮಠ, ಮುಂಡರಗಿ, ೧೯೮೩ ಪುಟ ೧೧೫

೨. ಶ್ರೀ ಉತ್ತಂಗಿ ಚನ್ನಪ್ಪ ಅವರು ಸಂಪಾದಿಸಿರುವ ಸರ್ವಜ್ಞನ ವಚನಗಳು, ಪ್ರಕಾಶ ಸಾಹಿತ್ಯ, ಬೆಂಗಳೂರು, ೧೯೯೯

೩. ಮೇಲಿನದೇ

೪. ಸರ್ವಜ್ಞ ಒಂದು ಸಮೀಕ್ಷೆ, ಸಂಪಾದಕರು: ಡಾ।। ಜಿ.ಎಸ್.ಶಿವರುದ್ರಪ್ಪ, ಬೆಂಗಳೂರು ವಿಶ್ವವಿದ್ಯಾನಿಲಯ, ೧೯೭೫, ಲೇಖಕ: ಚಿದಾನಂದಮೂರ್ತಿ

೫. ಸರ್ವಜ್ಞನ ಜೀವನ ಕೃತಿಗಳು ಹಾಗೂ ಸಂದೇಶಗಳು, ಡಾ।। ಬಿ.ಕೆ.ಹೊಸಮಠ, ಶ್ರೀ ಜಗದ್ಗುರು ಅನ್ನದಾನೀಶ್ವರ ಸಂಸ್ಥಾನ ಮಠ, ಮುಂಡರಗಿ, ೧೯೮೩ ಪುಟ ೨೧೨

# ಅಧ್ಯಾಯ ೪

## ಸರ್ವಜ್ಞನ ಕಾಣ್ಕೆ / ಉಪಸಂಹಾರ

ಸರ್ವಜ್ಞನ ವಚನಭಂಡಾರವನ್ನು ತಡಕಿದಾಗ ಅನೇಕ ಅಮೂಲ್ಯ ರತ್ನಗಳು ದೊರೆಯುತ್ತವೆ. ಅವು ಅನನ್ಯವಾಗಿವೆ, ಕ್ರಾಂತಿಕಾರಕವಾಗಿವೆ, ಮನನ ಯೋಗ್ಯವಾಗಿವೆ. ಅವುಗಳ ಮೇಲೆ ಸರ್ವಜ್ಞನ ಮುದ್ರೆ ಅಚ್ಚಳಿಯದೆ ಉಳಿದಿದೆ.

ಅವನ ಹೆಸರಿನಲ್ಲಿ ಲಭ್ಯವಿರುವ ವಚನರಾಶಿಯಲ್ಲಿ ಅತಿಶ್ರೇಷ್ಠ, ಅಮೂಲ್ಯ, ಅನನ್ಯ ಚಿಂತಾರತ್ನಗಳಿರುವಂತೆಯೇ, ಅತಿ ಸಾಮಾನ್ಯ, ನೀರಸ, ಚರ್ವಿತಚರ್ವಣಗಳಾಗಿರುವ ವಚನಗಳೂ ಇವೆ. ಅದಕ್ಕೆ ಕಾರಣ, ನಿಮಿತ್ತ, ಸಂದರ್ಭ, ಐತಿಹಾಸಿಕ ಒತ್ತಡಗಳು ಏನೇ ಇರಲಿ ಸರ್ವಜ್ಞನದೇ ಎನ್ನಬಹುದಾದ ವಚನಗಳನ್ನು ಮಾತ್ರ ಪ್ರತ್ಯೇಕಿಸಿ, ಸಂಗ್ರಹಿಸಿಕೊಡಬೇಕಾದ ಅಗತ್ಯ ಇಂದು ಎಂದಿಗಿಂತ ತುರ್ತಿನದ್ದಾಗಿದೆ. ಅಂಥ ಒಂದು ಸಂಗ್ರಹ ಸಾಧ್ಯವಾದರೆ, ಅದು ಅವನ ಕೃತಿ ವಿಮರ್ಶೆಯೂ, ಸಾರಗ್ರಹಿಕೆಯೂ ಆಗಿ ಪರಿಣಮಿಸಬಹುದು.

ಸರ್ವಜ್ಞನ ಅಸ್ತಿತ್ವ, ಮಹತ್ವ ಸಾಬೀತಾಗುವ ಹತ್ತಾರು ವಚನರತ್ನಗಳನ್ನು ಇಲ್ಲಿ ಹೆಕ್ಕಿಕೊಟ್ಟು ಅವುಗಳ ಬಗ್ಗೆ ನಾಲ್ಕು ಮಾತನಾಡುವುದು ಈ ನಿಬಂಧದ ಮುಕ್ತಾಯ ಘಟ್ಟದಲ್ಲಿ ನನ್ನ ಉದ್ದೇಶ. ಮತ್ತೆ ಅವು ನನ್ನ ವೈಯಕ್ತಿಕ ಅಭಿಪ್ರಾಯವೇ ಆಗಿಬಿಡುವ ಸಾಧ್ಯತೆಯನ್ನೂ ತಳ್ಳೀಹಾಕುವಂತಿಲ್ಲ.

ಮೊದಲಿಗೆ ಜ್ಞಾನದ (ಅರಿವು=ತಿಳಿವು) ಬಗ್ಗೆ ಅವನ ವಿಚಾರಗಳನ್ನು ನೋಡೋಣ ಜ್ಞಾನಪದ್ಧತಿಯಲ್ಲಿ ಸಂಕಲಿತವಾಗಿರುವ ಹಲವು ಹತ್ತು ವಚನಗಳಿವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಉದ್ಧರಿಸುತ್ತೇನೆ.

ಜ್ಞಾನದಿಂದಲಿ ಇಹವು ಜ್ಞಾನದಿಂದಲಿ ತರವು
ಜ್ಞಾನವಿಲ್ಲದಿರೆ ಸಕಲವೂ ತನಗಿದ್ದು
ಹಾನಿ ಕಾಣಯ್ಯ ಸರ್ವಜ್ಞ

ಅರಿವಿನ ಅರಿವು ತಾಥರೆಯೊಳಗೆ ಮೆರೆದಿಹುದು
ಅರಿವಿನ ಅರಿವ ಹರಿಹರ ಬೊಮ್ಮರೂ
ಅರಿಯರೈ ಕಾಣ ಸರ್ವಜ್ಞ

ಜ್ಞಾನ ಎನ್ನುವುದರ ವ್ಯಾಪ್ತಿ ದೊಡ್ಡದು. ಸಾಮಾನ್ಯ ತದಾರ್ಥ ಜ್ಞಾನದಿಂದ, ಲೋಕಜ್ಞಾನದಿಂದ, ತರಬ್ರಹ್ಮಜ್ಞಾನ, ವಿಜ್ಞಾನ ಎಲ್ಲವೂ ಸೇರಿಕೊಂಡಿದೆ.

ಎಷ್ಟಾದರೂ ಒಂದು ಶ್ರದ್ಧಾವಲಯದಲ್ಲಿ ಸಲ್ಲುವ ತ್ರಿಮೂರ್ತಿಗಳಿಗೂ ಜ್ಞಾನ ಎಂಬುದು ಎಟುಕದು ಎಂಬ ಗ್ರಹಿಕೆ ಮುಕ್ತ ಮನಸ್ಸಿಗೆ ಮಾತ್ರ ಸಾಧ್ಯ. ಸರ್ವಜ್ಞ ಕಲ್ಪನೆಯ ಸೀಮೋಲ್ಲಂಘನ ಮಾಡುವ ಸಾಹಸ ಮಾಡುತ್ತಾನೆ.

ಅಲ್ಲಿಪ್ಪನಿಲ್ಲಿಪ್ಪನೆಲ್ಲಿಪ್ಪನೆನಬೇಡ
ಕಲ್ಲಿನಂತಿಪ್ಪ ಮಾನವನ ಮನಕರಣೆ
ಅಲ್ಲಿಪ್ಪ ನೋಡ! ಸರ್ವಜ್ಞ.

ಶಿವ ಅಥವಾ ದೈವ ಎಂಬುದು ಒಂದು ಸಂಕೇತ. ಅವನು ಕರುಣಾಮಯ ಮಾನವನ ಮನದಲ್ಲೇ ಇದ್ದಾನೆ. ಎಲ್ಲ ಗುಡಿ ಗುಂಡಾರಗಳ, ಗರ್ಭಗುಡಿಗಳ ಬಾಹ್ಯ ಕಲ್ಪನೆಯನ್ನು ಕೈಬಿಟ್ಟ, ಸಾಕಾರ ಕಲ್ಪನೆಯನ್ನೂ ದೂಡಿಬಿಟ್ಟ. ಅಲ್ಲಿ, ಇಲ್ಲಿ, ಎಲ್ಲಿ, ಕಲ್ಲು, ಇಪ್ಪ ಎಂಬ ಅತಿ ಬಳಕೆಯ ಜನಸಾಮಾನ್ಯರ ಸರಳ ಶಬ್ದಗಳಲ್ಲೇ ಘನ ತತ್ವವನ್ನು ತೆರೆದಿಟ್ಟ. ಕಿರು ಕಟ್ಟಡದಲ್ಲಿ ಅಭಿವ್ಯಕ್ತಿ ಸಾರ್ಥಕವಾಗಿದೆ.

ಸತ್ತು ಹುಟ್ಟುವರೆಂಬ ಮಿಥ್ಯದ ನುಡಿಯೇಕೆ?
ಬಿತ್ತಿದರೆ ಬೀಜ ಬೆಳೆವಂತೆ ವೃಕ್ಷತಾ
ಸತ್ತು ಹುಟ್ಟುವುದೇ? ಸರ್ವಜ್ಞ

– ಈ ವಚನದಲ್ಲಿ ಒಂದೇ ಏಟಿಗೆ ಪುನರ್‌ಜನ್ಮ ನಂಬಿಕೆಯನ್ನು ದೂಡಿಬಿಟ್ಟ. ಅದು ಸಂಪ್ರದಾಯಸ್ಥರಿಗೆ ಒಪ್ಪೋ ತಪ್ಪೋ ಅದು ಬೇರೆ ಮಾತು. ಈ ಧೋರಣೆ ಮೆಚ್ಚ ತಕ್ಕದ್ದಾಗಿದೆ. [ಬೀಜ ವೃಕ್ಷದ ಭಾಗವೇ ಆಗಿರುವುದುದರಿಂದ ಜನನ – ಮರಣ ಚಕ್ರಗತಿ ಎಂದು ಸಹ ಪ್ರತಿವಾದ ಒಡ್ಡಬಹುದು.]

ಇಂದು ನಾಳೆಗೆ ಎಂದು ತಂದು ಕೂಡಿಡಬೇಡ
ಬಂದುದನೆ ಉಂಡು ಸುಖಿಸುವ ಬೇನೆಯದು
ಬಂದಾಗ ನರಳು ಸರ್ವಜ್ಞ

– ಬದುಕನ್ನು ಬಂದಂತೆ ಸ್ವೀಕರಿಸು, ಗೊಣಗಬೇಡ, ಇದೇ ಅಭಿಪ್ರಾಯ ಮತ್ತೊಂದು ವಚನದಲ್ಲಿ ಪುನರುಕ್ತವಾಗಿದೆ.

ಸುಖದುಃಖೇಷು ಅನುದ್ವಿಗ್ನಮನಾ ಎಂಬ ಭಗವದ್ಗೀತೆಯ ಉಪದೇಶದ ಛಾಯೆ ಇಲ್ಲಿದೆ. ಅದನ್ನು ನಿವೇದಿಸುವ ರೀತಿ ಭಿನ್ನವಾಗಿದೆ, ನೇರವಾಗಿದೆ.

ಏನಾದಡೇನಯ್ಯ ತಾನಾಗದನ್ನಕ್ಕ
ತಾನಾಗಿ ತನ್ನ ನೆಲೆಯನರಿದಾತನೊಲಿದು ತಾ
ನೆತ್ತಲಿದ್ದೇನು? ಸರ್ವಜ್ಞ

ಆತ್ಮಜ್ಞಾನ, ಆತ್ಮಸಾಕ್ಷಾತ್ಕಾರ ಎಂಬ ಘನವಿಚಾರ ಪ್ರತಿಪಾದನೆಯೆ ಇದು. ಅತ್ಯಂತ ಸರಳವಾದ ಅಚ್ಚಗನ್ನಡ ಪದಪುಂಜಗಳಲ್ಲಿ ಅದನ್ನು ಅಭಿವ್ಯಕ್ತಿಸಲು ಸಾಧ್ಯ ಎಂಬುದನ್ನು ತೋರಿಸಿಕೊಟ್ಟಿದ್ದಾನೆ. ಕನ್ನಡ ನುಡಿಯ ಅಭಿವ್ಯಕ್ತಿಯ ಶಕ್ತಿ ಇಲ್ಲಿ ಎದ್ದು ಕಾಣುತ್ತದೆ.

ಜ್ಞಾನಿಯ ಅಜ್ಞಾನಿಯ ಲಕ್ಷಣಗಳೇನು?

ಜ್ಞಾನಿಗಜ್ಞಾನಿಗಂ ತಾನೊಂದು ಕುರುಹುಂಟು
ಏನೊಂದನಾತ ನುಡಿದಿಹೆರೆ ಜ್ಞಾನಿ ತಾ
ಮೌನವಾಹಿಗನು ಸರ್ವಜ್ಞ
ಇದೇ ಚಿಂತನ ಮುಂದುವರಿದು,

ಬೊಮ್ಮವನು ಅರಿದಿದ್ದರೆ ಬಿಮ್ಮಗಿದ್ದಿರಬೇಕು ಎಂಬಲ್ಲಿ ಮತ್ತಷ್ಟು ವಿವರಣೆಯನ್ನು ಪಡೆದುಕೊಳ್ಳುತ್ತದೆ.

ಅಕ್ಕರವು ಲೇಖಕ್ಕೆ ತರ್ಕತಾವಾದಕ್ಕೆ
ಮಿಕ್ಕ ಓದುಗಳು ತಿರುಪೆಗೆ ಮೋಕ್ಷಕ್ಕೆ
ಡಕ್ಕರವೇ ಸಾಕು ಸರ್ವಜ್ಞ

ಇದೇ ವಚನ ರೂಪಾಂತರದೊಡನೆ, ಮೋಕ್ಷಕ್ಕಾಱಕ್ಷರವೆ ಸಾಕು ಎಂದೂ ಸಹ ಪರಿವರ್ತನೆಯಾಗಿದೆ. (ಹರ, ಓಂನಮಃ ಶಿವಾಯಃ) ಆ ಅಕ್ಷರಗಳಾವುವು ಎಂಬುದನ್ನು ಸ್ಪಷ್ಟಪಡಿಸದೆ ಪರೋಕ್ಷವಾಗಿ ಸೂಚಿಸಿರುವುದರಿಂದಲೇ ಇದಕ್ಕೆ ಧ್ವನಿ ಶಕ್ತಿ ಕೂಡಿಕೊಳ್ಳುತ್ತದೆ. ಅವರವರ ಶ್ರದ್ಧಾ ವಲಯವನ್ನು ಅನುಸರಿಸಿ ಯಥೇಚ್ಛ ಕಲ್ಪಿಸಿಕೊಳ್ಳಬಹುದು. [ಏಸು, ಅಲ್ಲಾ ಎಂದು ಭಾವಿಸಲು ಅಡ್ಡಿಯಿಲ್ಲ, ಈ ಕಾಲದಲ್ಲಿ].

ರಾಗವಿದ್ದರೆ ಭೋಗ ಭೋಗವಿದ್ದರೆ ರಾಗ
ರಾಗದಿ ಸಕಲ ಸಂಪದವು ಜಗದಿವಿ
ರಾಗವೇ ಯೋಗ ಸರ್ವಜ್ಞ

ಶಬ್ದದ ಚಮತ್ಕಾರವೇ ಆಗಿದ್ದರೂ ಶುಷ್ಕವಾಗಿಲ್ಲ, ಅರ್ಥಹೀನವಾಗಿಲ್ಲ.

ಅನ್ನವನು ಇಕ್ಕುವುದು ನನ್ನಿಯನು ನುಡಿಯುವುದು
ತನ್ನಂತೆ ಪರರ ಬಗೆದೆಡೆ ಕೈಲಾಸ
ಬಿನ್ನಾಣವಕ್ಕು ಸರ್ವಜ್ಞ

ಇದು ಪ್ರಸಿದ್ಧ, ಜನಪ್ರಿಯ, ಸಾರ್ಥ ವಚನ. ಮೂರು ಕರ್ಮಗಳನ್ನು ವಿಧಿಸಿದ್ದಾನೆ.

ಅನ್ನದಾನ, ಸತ್ಯವಚನ, ತಾನು-ಪರ ಎಂಬಲ್ಲಿ ಅಭೇಧ. ಇಷ್ಟಾದರೆ, ಸಮಾಜದ ನೋವು ಕಡಿಮೆಯಾಗುತ್ತದೆ; ವ್ಯವಹಾರ ಸುಗಮವಾಗುತ್ತದೆ; ಸಾಮರಸ್ಯ ಮೂಡುತ್ತದೆ; ಶಾಂತಿ ನೆಲೆಸುತ್ತದೆ.

ಆಗ ಬಾ ಈಗ ಬಾ ಹೋಗಿಬಾ ಎನ್ನದಲೆ

ಆಗಲೆ ಕರೆದು ಕೊಡುವವನ ಧರ್ಮ ಹೊ
ನ್ನಾಗದೆ ಬಿಡದು ಸರ್ವಜ್ಞ

ಸರಳವಾದ ಆಡುಮಾತಿನಲ್ಲಿ, ದಾನ ಮಾಡುವ ಪರಿ ಕ್ರಮವನ್ನು ವಿವರಿಸಿದ್ದಾನೆ. ಸಂವಾದ ರೂಪದಲ್ಲಿರುವ ಸಾಲುಗಳು ಒಂದು ದೃಶ್ಯವನ್ನು ಮೂಡಿಸುತ್ತದೆ. ನಾಟಕೀಯ ಪರಿಣಾಮವನ್ನುಂಟು ಮಾಡುತ್ತದೆ.

ದಾನಕ್ಕೆ ಸಂಬಂಧಿಸಿದ ಇನ್ನೆರಡು ವಚನಗಳು ಸಹ ಉಲ್ಲೇಖಾರ್ಹವಾಗಿವೆ.

ಆಡದೆ ಕೊಡುವವನು ರೂಢಿಯೊಳಗುತ್ತಮನು
ಆಡಿ ಕೊಡುವವನು ಮಧ್ಯಮನಧಮ ತಾ
ನಾಡಿ ಕೊಡದವನು ಸರ್ವಜ್ಞ

ಆಡು = ಮಾತನಾಡಿ, ಭರವಸೆ ಕೊಟ್ಟು, ಟೀಕೆಮಾಡಿ, ಎಂದೆಲ್ಲಾ ಅರ್ಥ ಛಾಯೆಗಳನ್ನು ಪಡೆದುಕೊಂಡು ಹಿಗ್ಗುತ್ತದೆ, ಸಾಂಧರ್ಭಿಕವಾಗಿ.

ಉತ್ತಮ ಕವಿತೆ ಅರ್ಥ ಸಾಧ್ಯತೆಗಳನ್ನು ಸೂರೆ ಮಾಡಬೇಕು. ಅದು ಇಲ್ಲಿ ಆಗಿದೆ. ಹಾಗೆಯೇ

ಸೊಡರೆಣ್ಣೆ ತೀರಿದರೆ ಕೊಡನೆತ್ತಿಸುರಿದಿಹರೆ?
ಕೊಡಬೇಡ ಕೊಡದೆ ಇರಬೇಡ ದಾನವನು
ಬಿಡಬೇಡವೆಂದ ಸರ್ವಜ್ಞ

ಇದರ ಧ್ವನಿ ಪ್ರಚುರತೆಯನ್ನು ಕುರಿತು ನಿಬಂಧದ ಮತ್ತೊಂದೆಡೆ ವಿವರಿಸಲಾಗಿದೆ. ದಾನಕ್ಕೆ ಸಂಬಂಧಿಸಿದ ಮತ್ತೊಂದು ವಚನವು ಗಮನಾರ್ಹ.

ಉಳ್ಳಲ್ಲಿ ಉಣಲಿಲ್ಲ ಉಳ್ಳಲ್ಲಿ ಉಡಲಿಲ್ಲ
ಉಳ್ಳಲ್ಲಿ ದಾನ ಕೊಡಲೊಲ್ಲದವನೊಡವೆ
ಕಳ್ಳಗೆ ನೃಪಗೆ ಸರ್ವಜ್ಞ

ಉಣು, ಉಡು, ಕೊಡು, ಉಳ್ಳಲ್ಲಿ ಎಂಬ ಅಚ್ಚಗನ್ನಡ ಶಬ್ದಗಳಲ್ಲಿ ಎಂಥ ಅರ್ಥವ್ಯಂಜಕತೆ ಇದೆ! ಸಂಸ್ಕೃತ ಶಬ್ದಾವಳಿಯ ಹಂಗೇ ಇಲ್ಲದೆ ಕಾವ್ಯ ನಡೆಯುತ್ತದೆ. ಕನ್ನಡ ನುಡಿಯ ನಾಡಿ ಮಿಡಿತ, ಉಸಿರು, ಸರ್ವಜ್ಞ ಕವಿಗೆ ಚೆನ್ನಾಗಿ ಗೊತ್ತಿದೆ.

ಹೇಡಿಂಗೆ ಹಿರಿತನವು ಮೂಢಂಗೆ ಗುರುತನವು
ನಾಡನೀಚಂಗೆ ದೊರೆತನವು ದೊರೆತಿಹರೆ
ನಾಡೆಲ್ಲ ಕೆಡುಗು ಸರ್ವಜ್ಞ

ಲೇಸು, ಹೊಲ್ಲ ಇತ್ಯಾದಿ ಶಬ್ದಗಳನ್ನು ಬಳಸಿ ಸುಲಭವಾಗಿ ಪದ್ಯ ಹೆಣೆಯುತ್ತಾನೆ, ಯಾಂತ್ರಿಕವಾಗಿ, ಅವು ನೀರಸ ಪಟ್ಟಿಯಾಗಿವೆ. ಆದರೆ ಇಲ್ಲಿ ಮೂರು ರೇಖೆಗಳಲ್ಲಿ ಒಂದು ನಾಡಿನ ಕೇಡಿನ ಚಿತ್ರ ಬಿಡಿಸಿದ್ದಾನೆ.

ಸಜ್ಜನರ ಸಂಗವದು ಹೆಜ್ಜೇನ ಕೊಡದಂತೆ
ದುರ್ಜನರ ಸಂಗನೊಡದಾಟ ಬಚ್ಚಲಿನ
ರೊಜ್ಜಿನಂತಿಹುದು ಸರ್ವಜ್ಞ

ಜನಪ್ರಿಯ, ಪ್ರಚಲಿತ ವಚನ ಇದು ಜನಸಾಮಾನ್ಯರ ನಾಲಗೆಯಲ್ಲಿ ನಲಿದಾಡುತ್ತಿದೆ. ಇದರ ವ್ಯಾಖ್ಯಾನವನ್ನು ಇದೇ ನಿಬಂಧದ ಸಜ್ಜನರ ಸಂಗ ಭಾಗದಲ್ಲಿ ನೋಡಬಹುದು.

ದಂತಪಂಕ್ತಿಯ ನಡುವೆ ಎಂತಿಪ್ಪದು ಜಿಹ್ವೆ

ದುರ್ಜನರ ನಡುವೆ ಬಾಳುವ ಉಪಾಯವನ್ನು ಒಂದು ಉಪಮಾನದ ಮೂಲಕ ತಿಳಿಸಿತ್ತದೆ. (ಇದರ ವಿವರಣೆಯು ಮೊದಲೇ ಬಂದಿದೆ)

ಬರಕಂಡು ಕರೆಯದವನ ಇರೆ ಕುಳ್ಳಿರೆನ್ನದನ
ಸರಸ ಸಜ್ಜನಿಕೆ ಇಲ್ಲದವನ ಸಖತನವ
ಬೆರಸಲೇಬೇಡ ಸರ್ವಜ್ಞ

ನಮ್ಮ ಕಡೆಗೆ ಆಗಮಿಸುತ್ತಿರುವ , ಶಿಷ್ಟಾಚಾರಕ್ಕೆ ನಿಂತೇ ಇರುವ ಎಂದು ಅರ್ಥವ್ಯಾಪ್ತಿ ಪಡೆದುಕೊಳ್ಳುತ್ತದೆ, ಬರೆ, ಇದೆ, ಎಂಬ ಚುಟುಕ ಶಬ್ದಗಳು ವಚನ ರಚನಾ ವಿಧಾನದಲ್ಲಿ ಪದವಿನ್ಯಾಸದಲ್ಲಿ ಆ ಕೌಶಲವಿದೆ, ಗಮನಿಸಿ.

ಅಂಬುತಾಗಿದ ಎರಳೆ ಕೊಂಬೂರಿ ಬೀಳ್ವಂತೆ , ಅಂಬುತಾಗಿದ ಹುಲ್ಲೆ ಇಂಬಿಲ್ಲದಲೆವಂತೆ ಎಂಬ ಉಪಮೆಗಳಲ್ಲಿ ಆ ದೃಶ್ಯ ಕಲ್ಪನೆ ಉಂಟಾಗುತ್ತದೆ. ಮಹಾಕಾವ್ಯಗಳಲ್ಲಿ, ಕವನಗಳಲ್ಲಿ ಕಾಣುವ ನುಡಿಚಿತ್ರ ಇದು.

ಆ ಯುಗಧರ್ಮದ, ಜನಪದದ ನಂಬುಗೆಯ ಫಲವಾಗಿ ವಿಧಿವಾದ, ಪ್ರಾರಬ್ಧಕರ್ಮ ಇತ್ಯಾದಿ ಮಾತುಗಳು ಕಾಣಿಸಿಕೊಳ್ಳುತ್ತವೆ. ಆದರೂ ಪುರುಷ ಪ್ರಯತ್ನದ ಸೂಚನೆಯೂ ಇದೆ.

ನಡೆವುದನು ತಾಹಾಸಿ ನಡೆವುದನೆ ತಾಹೊದೆದು
ನಡೆಯುವ ಪಥದಿ ಅಡಿಯಿಡಲು ವಿಧಿಯು ತಾ
ತಡೆಯದೋಡುವುದು ಸರ್ವಜ್ಞ

–ಎಂಬ ವಿಶ್ವಾಸವೂ ಉಂಟು. (ತಮಿಳು ಕವಿ ತಿರುವಳ್ಳವರು ಸಹ, ದೈವ (ವಿಧಿ) ಪ್ರತಿಕೂಲವಾಗಿದ್ದರೂ ಮನುಷ್ಯ ಪ್ರಯತ್ನಕ್ಕೆ ತಕ್ಕ ಫಲ ದೊರೆತ ದೊರೆಯುತ್ತದೆ ಎಂದಿರುವುದನ್ನು ಈ ಪ್ರಸ್ತಾವದಲ್ಲಿ ನೆನಪಿಸಿಕೊಳ್ಳಬಹುದು.)

ವೇದದಲ್ಲಿ ಏನಿದೆ? ಅನುಭವಿಯ ವೇದವೇ ವೇದ ಎಂಬಲ್ಲಿ ಸ್ವತಂತ್ರ ಮನೋವೃತ್ತಿ ಎದ್ದು ಕಾಣುತ್ತದೆ.

ಹಾದರದ ಕಥೆಯನ್ನು ಸೋದರರ ವಧೆಯನ್ನು
ಆದರಿಸಿ ಪುಣ್ಯ ಕಥೆಯೆಂದು ಕೇಳುವರು
ಮಾದಿಗರು ನೋಡ ಸರ್ವಜ್ಞ

ಈ ವಚನ ಅನುದಾರ ಮಾತ್ರವಲ್ಲ, ಅಪಕ್ವ ಜ್ಞಾನದಫಲ, ಅಲ್ಲದೆ ಮಾದಿಗರು ಎಂಬ ಶಬ್ದ ಪ್ರಯೋಗ ಕೇವಲ ಪ್ರಾಸಕ್ಕಾಗಿ ಎಳೆದತಂದದ್ದು. ಯಾವುದೋ ಮತೀಯ ಪೂರ್ವಾಗ್ರಹ ಅವನನ್ನು ಕುಣಿಸಿದೆ. ಅದು ತಾತ್ಕಾಲಿಕ, ಸಂಚಾರಿಭಾವ ಇರಬೇಕು.

ನೀರುಮುಳುಗಿದ ವಿಪ್ರ ಹಾರುವಡೆ ಸ್ವರ್ಗಕ್ಕೆ
ಹಾರುವನೊಲು ಮುಳುಗಿಪ್ಪ ಕಪ್ಪೆತಾ
ಹಾರದೇಕೆಂದ ಸರ್ವಜ್ಞ

***

ಒಂದಾಡ ತಿಂಬಾತ ಹೊಂದಿದಡೆ ಸ್ವರ್ಗವನು
ಎಂದೆಂದು ಆಜನ ಕಡಿರೆಂಬ ಕಟಿಗತಾ
ನಿಂದ್ರನೇಕಾಗ ಸರ್ವಜ್ಞ

ಮೊದಲಾದ ಹತ್ತಾರು ವಚನಗಳಲ್ಲಿ ವೀರಶೈವ ಸಿದ್ಧಾಂತದ ನೆಲೆಯಲ್ಲಿ ನಿಂತು ವರ್ಣಭೇದವನ್ನು, ಯಾಗ ಯಜ್ಞಗಳನ್ನು ಟೀಕಿಸುತ್ತಿರುವುದು ಸ್ಪಷ್ಟವಿದೆ.

ಕುಲವಿಲ್ಲ ಯೋಗಿಗೆ ಛಲವಿಲ್ಲ ಜ್ಞಾನಿಗೆ
ತೊಲೆಕಂಬವಿಲ್ಲ ಗಗನಕ್ಕೆ ಸ್ವರ್ಗದಲಿ
ಹೊಲಗೇರಿಯಿಲ್ಲ ಸರ್ವಜ್ಞ

ಎಂಬ ವಚನವು ಇಲ್ಲ ಎಂಬುದನ್ನು ಪಟ್ಟಿಮಾಡುವ ಒಂದು ರಚನಾ ವಿಧಾನವಾದರೂ ಈ ವಚನ ಶುಷ್ಕ ಪಟ್ಟಿಯಾಗಿಲ್ಲ.

ಸ್ವರ್ಗದಲಿ ಹೊಲಗೇರಿ ಇಲ್ಲ ಎಂಬ ಘೋಷಣೆ ಅನೇಕ ಅರ್ಥದ ಪದರುಗಳನ್ನು ಬಿಚ್ಚಿ ತೋರುತ್ತದೆ. ಭೂಲೋಕದಲ್ಲಿರುವುದು ಮಾನವ ನಿರ್ಮಿತ; ಹೊಲಗೇರಿಯನ್ನು ತಪ್ಪಿಸಿದರೆ ಇಹವೇ ಪರವಾಗುತ್ತದೆ. ....... ಇತ್ಯಾದಿ. ...

ಈ ಮುಂದಿನ ಉದ್ಧರಿತ ವಚನವಂತು ಅವನ ಮನೋಧರ್ಮದ ಕ್ರಾಂತಿಕಾರಿ ಧೋರಣೆಯ ಪ್ರತೀಕವಾಗಿದೆ. ಇದರಲ್ಲಿ ಸ ಸರ್ವಜ್ಞತ್ವದ ಮುದ್ರೆ ಬಿದ್ದಿದೆ.

ನಡೆವುದೊಂದೇ ಭೂಮಿ ಕುಡಿವುದೊಂದೇ ನೀರು

ಸುಡುವಗ್ನಿಯೊಂದೆ ಇರುತಿರಲು ಕುಲಗೋತ್ರ
ನಡುವೆ ಎತ್ತಣದು ಸರ್ವಜ್ಞ

ಇದೇ ಕ್ರಾಂತಿಕಾರಕ, ಮುಕ್ತ ವಿಚಾರವೈಖರಿಯ ಫಲವಾಗಿ ಈ ಕೆಳಗೆ ಉದ್ಧರಿತ ವಚನ ಮೂಡಿಬಂದಿದೆ ಎನ್ನಬೇಕು.

ಅವಯವಗಳೆಲ್ಲರಿಗೆ ಸವನಾಗಿ ಇರುತಿರಲು
ಭವಿಭಕ್ತ ಶ್ವಪಚ ಶೂದ್ರರಿವರೆಂತೆಂಬ
ಕವನವೆತ್ತಣದು ಸರ್ವಜ್ಞ

ವೀರಶೈವನಾಗಿರಬಹುದಾದ ಸರ್ವಜ್ಞ ವೀರಶೈವರಲ್ಲಿರುವ ಭವಿಭಕ್ತ ಎಂಬ ಭೇದವನೆತ್ತಿ ಆಡಿದ್ದಾನೆ, ನಿರಾಕರಿಸಿದ್ದಾನೆ. ಇದೇ ಸರ್ವಜ್ಞತನ . ಜಾತಿಭೇದವನ್ನು, ವರ್ಣಭೇದವನ್ನು ನಿರಾಕರಿಸುವ ಸಂದರ್ಭದಲ್ಲಿ ಬ್ರಾಹ್ಮಣ ವರ್ಣದವರ ಮೇಲೆ ದಾಳಿ ಮಾಡಿರುವುದು ನಿಜವಾದರೂ, ಗುಣಪಕ್ಷಪಾತಿಯಾಗಿ ಹೀಗೆ ನುಡಿದಿದ್ದಾನೆ.

ಮಾತನರಿದ ಸುತನು ರೀತಿಯರಿದ ಸತಿಯು
ನೀತಿಯನು ಅರಿದ ವಿಪ್ರ ತಾಜಗದೊಳಗೆ
ಜ್ಯೋತಿಯಿದ್ದಂತೆ ಸರ್ವಜ್ಞ

ಇಲ್ಲಿ ಇನ್ನೊಂದೆರಡು ವಚನಾಗಳಲ್ಲು ಸದ್‌ಬ್ರಾಹ್ಮಣರನ್ನು ಕೊಂಡಾಡಿದ್ದಾನೆ. ಸರ್ವಜ್ಞನ ಉದಾರನೀತಿಗೆ, ಸರ್ವಧರ್ಮ ಸಮಾನತಾ ಭಾವಕ್ಕೆ ಎತ್ತಿದ ಗರಿಯಾಗಿ, ಮುಡಿಯಾಗಿ ಈ ವಚನ ಕಂಗೊಳಿಸುತ್ತಿದೆ. ಕೊಲುವ ಧರ್ಮವನೊಯ್ದು ಒಲೆಯೊಳಗೆ ಇಕ್ಕುವ ಕೊಲಲಾಗದೆಂಬ ಜೈನ ಮತವೆನ್ನ ತಲೆಯ ಮೇಲಿರಲಿ ಸರ್ವಜ್ಞ. ಪ್ರಾಣಿ ಹಿಂಸೆ, ಮಾಂಸಾಹಾರವನ್ನು ಸರ್ವತಾ ಒಪ್ಪದ ಸರ್ವಜ್ಞ ಸಂದರ್ಭ ಸಿಕ್ಕಾಗಲೆಲ್ಲ ಕೊಲುವವರನ್ನು, ತಿನ್ನುವವರನ್ನು ಟೀಕಿಸುತ್ತಾನೆ. ಈ ವಿಚಾರದಲ್ಲೂ ಅವನು ತಮಿಳು ಸಂತ ಕವಿ ತಿರುವಳ್ಳುವರನ್ನು ಹೋಲುತ್ತಾನೆ. (ತಿರುವಳ್ಳುವರ್ ತಮ್ಮ ಗ್ರಂಥದಲ್ಲಿ ಮಾಂಸಾಹಾರ ಸೇವನೆಯ ಬಗ್ಗೆ ಹತ್ತಾರು ಕುರುಳ್‌ಗಳಲ್ಲಿ ಕಟುವಾಗಿ ಟೀಕಿಸಿದ್ದಾರೆ).

ಒಳ್ಳೆಯವನು ಇರದೂರು ಕಳ್ಳನೊಡನಾಟವು
ಸುಳ್ಳನ ಮಾತು ಇವು ಮೂರು ಕೆಸರೊಳಗೆ
ಮುಳ್ಳುತುಳಿದಂತೆ ಸರ್ವಜ್ಞ

ಅಭಿವ್ಯಕ್ತಿಯಲ್ಲಿನ ನಾವೀನ್ಯತೆ, ಪರಿಣಾಮ ರಮ್ಯತೆ, ಉಪಮಾನದ ಅರ್ಥವಂತಿಕೆಯಿಂದ ಈ ವಚನ ಗಮನಾರ್ಹ. ಪರವಧು ನಿಸ್ಪೃಹತೆಯ ನೀತಿ ವಚನಕಾರರಿಂದ ಪ್ರಭಾವಿತವಾಗಿರುವಂತಿದೆ. ಆ ಬಗ್ಗೆ ಅನೇಕ ವಚನಗಳಿವೆ.

ಕಂಡುದನು ಆಡೆ ಭೂಮಂಡಲವು ಮುನಿಯುವುದು

ಕೊಂಡಾಡುತಿಚ್ಛೆ ನುಡಿದಿಹರೆ ಜಗವೆಲ್ಲ
ಮುಂಡಾಡುತಿಹುದು ಸರ್ವಜ್ಞ

ಕಂಡದು, ಕೊಂಡಾಡು, ಮುಂಡಾಡು, ಮಂಡಲ– ಈ ಶಬ್ದ ಜಾಲಗಳಲ್ಲಿ ನಿರಾಯಾಸವಾಗಿ ಪ್ರಾಸ, ಒಳಪ್ರಾಸ ಕೂಡಿಕೊಂಡು ಸುಗಮವಾದ ಶಿಲ್ಪ– ನುಡಿಶಿಲ್ಪ ಸಿದ್ಧವಾಗಿದೆ. ಕವಿಯ (Diction) ಪದವಿನ್ಯಾಸ ಅದ್ಭುತವಾಗಿದೆ.

ವಚನದೊಳಗೆಲ್ಲವರು ಶುಚಿ ವೀರ ಸಾಧುಗಳು
ಕುಚಶಸ್ತ್ರ ಹೇಯ ಸೋಂಕಿದರೆ ಲೋಕದೊಳ
ಗಚಲದವರಾರು? ಸರ್ವಜ್ಞ

ಇದು ಸಾರ್ವಕಾಲಿಕ, ಸಾರ್ವದೇಶಿಕ ಸತ್ಯ. ಇದನ್ನು ವ್ಯಕ್ತಪಡಿಸಲು ಯಾರೂ ಬಯಸರು. ಆದರೆ ಸರ್ವಜ್ಞ ನಿರ್ಭಿಡೆಯಿಂದ, ಕಟುವಾಗಿ ಕುಟುಕಿದ್ದಾನೆ. ಅಭಿವ್ಯಕ್ತಿಯ ರೀತಿಯು ಅನನ್ಯವಾಗಿದೆ.

ಜೂಜಿನ ದುಷ್ಪರಿಣಾಮವನ್ನು ತಿಳಿಸುವ ಈ ವಚನ ನೋಡಿ.

ನೆತ್ತವೂ ಕುತ್ತವೂ ಹತ್ತಿದೊಡೆ ಅಳವಲ್ಲ
ಕುತ್ತದಿಂ ದೇಹ ಬಡವಕ್ಕು, ನೆತ್ತದಿಂ
ಬತ್ತಲೆಯಕ್ಕು ಸರ್ವಜ್ಞ

ಅಭಿವ್ಯಕ್ತಿಯಲ್ಲಿ ಸೊಗಸಿದೆ, ಪರಿಣಾಮವಿದೆ.

ಮಾತಿನಿಂ ನಗೆನುಡಿಯು ಮಾತಿನಿಂ ಹಗೆ ಹತಿಯು
ಮಾತಿನಿಂ ಸರ್ವಸಂಪದವು ಲೋಕಕ್ಕೆ
ಮಾತೆ ಮಾಣಿಕವು ಸರ್ವಜ್ಞ

ರಸಿಕನಾಡಿದ ಮಾತು ಶಶಿಯುದಿಸಿ ಬಂದಂತೆ
ರಸಿಕನಲ್ಲದನ ಬರಿಮಾತು ಕಿವಿಗೆ ಕೂರ್
ದಸಿಯ ಬಡಿದಂತೆ ಸರ್ವಜ್ಞ

ಮಾತಿನ ಮಹತ್ವದ ಬಗ್ಗೆ ನಾಲ್ಕಾರು ವಚನಗಳಿವೆ. ಬಹುಶಃ ಮಾತು ಅಥವಾ ನುಡಿಯ ಬಗ್ಗೆ ತಲಸ್ಪರ್ಶಿಯಾಗಿ ವಿಚಾರ ಮಾಡಿ ಬರೆದ ಪದ್ಯಗಳು ಕನ್ನಡದಲ್ಲಿ ಇವನನ್ನು ಬಿಟ್ಟು ಬೇರೆ ಇರಲಾರದು.

ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆಯೇ ಮೇಲು
ಮೇಟಿಯಿಂ ರಾಟೆ ನಡೆದುದಲ್ಲದೆ ದೇಶ
ದಾಟವೇ ಕೆಡುಗು ಸರ್ವಜ್ಞ.

ಇದು ಚಿರಂತನ ಸತ್ಯ, ಧ್ರುವಸತ್ಯ. ಇದರ ಬಗ್ಗೆ ವಿಶ್ಲೇಷಣೆ ನಿಬಂಧದ ವೃತ್ತಿಗಳು ಭಾಗದಲ್ಲಿ ಬಂದಿದೆ.

ತುರುಕರವು ಇರದೂರು ನರಕಭಾಜನವಕ್ಕು
ತುರುಕರುಂಟಾದರುಣಲುಂಟು ಜಗಕೆಲ್ಲ
ತುರುಕರುವೆ ದೈವ ಸರ್ವಜ್ಞ

ಈ ವಚನವೂ ಉಲ್ಲೇಖಾರ್ಹವಾಗಿದೆ. ನಿಬಂಧದ ಒಡಲಲ್ಲಿ ಅನ್ಯತ್ರ ಇದರ ವಿಶ್ಲೇಷಣೆ ಬಂದಿದೆ.

ಅಲ್ಲಪ್ಪನೂರಲ್ಲಿ ಬಲ್ಲಪ್ಪನಲ್ಲಪ್ಪ
ಬಲ್ಲಪ್ಪನಿಲ್ಲದೂರಲ್ಲಿ ಅಲ್ಲಪ್ಪ
ಬಲ್ಲಪ್ಪನಪ್ಪ ಸರ್ವಜ್ಞ

ದುರ್ಜನರಿರುವ ಊರಿನಲ್ಲಿ ಜ್ಞಾನಿಯೇ ಸಜ್ಜನ; ಜ್ಞಾನಿಗಳ ಊರಿನಲ್ಲಿ ದುರ್ಜನನೇ ಜ್ಞಾನಿಯಾಗಿ ಬಿಡುತ್ತಾನೆ ಎಂಬುದು ಇದರ ತಾತ್ಪರ್ಯ.

ಸಂಸ್ಕೃತದ ಹಂಗಿಲ್ಲದೆ ಕನ್ನಡ ಶಬ್ದಗಳಲ್ಲಿಯೇ ಈ ಹೇಳಿಕೆಯನ್ನು ತಂದಿದ್ದಾನೆ. ಇಂಥ ರಚನೆಗಳಲ್ಲಿ ಕನ್ನಡವೇ ಉಕ್ಕಿನ ಕಡಲೆಯಾಗಿದೆ. ಇವನ ವಚನ ರಾಶಿಗಳಲ್ಲಿ ಒಂದು ಕಡೆ "ಅಕ್ಕರವ ಕಲಿತ ಹೊಲೆಯನು ಚೊಕ್ಕವಲ್ಲ" ಎಂದೂ, "ಒಕ್ಕಲಿಗ ಓದಲ್ಲ" ಎಂದೂ "ಹೊಲೆಯಗಿತ್ತ ಸಾಲ ನಿಲ್ಲುವುದಿಲ್ಲ" ಎಂದೂ ವಾಕ್ಯಭಾಗಗಳಿವೆ. ಇವೆಲ್ಲ ಸಂಪ್ರದಾಯ ಜಡ, ಅವಹೇಳನಗಳು ಇಲ್ಲೆಲ್ಲ ಸರ್ವಜ್ಞ "ಗತಾನುಗತಿಕ" ಎಂಬಂತೆ ಸಲೀಸು ಬರೆದುಬಿಡುತ್ತಾನೆ. ಇದು ನಕಾರಾತ್ಮಕ ಧೋರಣೆ.

ಕರೆಯದಲೆ ಬರುವವನ ಬರೆಯದೇ ಓದುವವನ
ಬರಿಗಾಲಿನಿಂದ ನಡೆವವನ ಕರೆತಂದು
ಕೆರದಿ ಹೊಡೆಯೆಂದ ಸರ್ವಜ್ಞ

ಆಹ್ವಾನವಿಲ್ಲದ ಕಡೆ ಹೋಗಬಾರದು; ಓದು-ಬರಹ ಪರಸ್ಪರ ಪೂರಕ, ಮೆಟ್ಟು ಧರಿಸದೆ ನಡೆದಾಡಿದರೆ, ಅಂಗಾಲಿಗೆ ಅಪಾಯ – ಇದಿಷ್ಟು ವಿವಕ್ಷಿತ ಅರ್ಥ. ಅವರನ್ನು ಕರೆತಂದು ಮೆಟ್ಟಿನಲಿ ಹೊಡೆಯಬೇಕಂತೆ. ಇಲ್ಲಿ 'ಕೆರ' ಶಬ್ದ ಅನುದ್ದೇಶಿತವಾಗಿ ಪ್ರಾಸಸ್ಥಾನದಲ್ಲಿ ಪ್ರಾಸಕ್ಕಾಗಿ ಎಳೆದುತಂದದ್ದು.

ಇದೊಂದು ವಚನ ಚಮತ್ಕಾರಪೂರ್ಣವಾಗಿಯೂ, ನವಿರಾದ ಹಾಸ್ಯಪ್ರೇರಕವಾಗಿಯೂ ಇದೆ.

ನಲ್ಲ ಒಲ್ಲೆಯನೊಲ್ಲ ನಲ್ಲಕ್ಕಿಬೋನೊಲ್ಲ
ಅಲ್ಲವನು ಬಲ್ಲ ಮೊಸರೊಲ್ಲ, ಯಾಕೊಲ್ಲ?
ಇಲ್ಲ, ಆದಕೊಲ್ಲ ಸರ್ವಜ್ಞ

ನಲ್ಲನಿಗೆ ವಲ್ಲಿ (ಉತ್ತರೀಯ) ಬೇಡ, ಉತ್ತಮ ಅಕ್ಕಿಯ ಊಟ ಬೇಡ, ಶುಂಠಿ ಬೇಡ, ಮೊಸರು ಬೇಡವಂತೆ, ಯಾಕೆ? 'ಇಲ್ಲ ಆದಕೊಲ್ಲ ಸರ್ವಜ್ಞ' ಅವನದು ಆಭಾವ ವೈರಾಗ್ಯ.

ಹಂಗಿನರಮನೆಯಿಂದ ವಿಂಗಡದ ಗುಡಿಲೇಸು

ಭಂಗಬಟ್ಟುಂಬ ಬಿಸಿಯನ್ನಕ್ಕಿಂತಲೂ
ತಂಗುಳವೆ ಲೇಸು ಸರ್ವಜ್ಞ

ಯಾರದೋ ಋಣದಲ್ಲಿ ಕೃಪೆಯಲ್ಲಿ ಅರಮನೆಯಲ್ಲಿ ವಾಸ ಮಾಡುವುದಕ್ಕಿಂತ ಹಂಗಿಲ್ಲದ, ಏಕಾಂತದ (ವಿಂಗಡ) (ಪಾಳು) ಗುಡಿಯೇ ಲೇಸು. ಅದೇ ರೀತಿ ಅವಮಾನಪಟ್ಟು ಬಿಸಿಯನ್ನ ಉಣ್ಣುವುದಕ್ಕಿಂತಲೂ (ನಮ್ಮ ಮನೆಯ) ತಂಗುಳವೇ ಲೇಸು. ಇದು ಮಾನಾಭಿಮಾನದ ಪ್ರಶ್ನೆ.

ಸರ್ವಜ್ಞನ ಮನೋಧರ್ಮ ಎಲ್ಲರನ್ನು ಕಟ್ಟಿಕೊಳ್ಳುವುದು. ಎಲ್ಲರ ನಡುವೆ ಬಾಳುವುದು. ಆತ ನಾಡಾಡಿಯಾದರೂ ಸಂಸಾರಿ, ವಿಶ್ವಕುಟುಂಬಿ. ಆ ಭಾವ ಈ ವಚನದಲ್ಲಿ ಮಡುಗಟ್ಟಿದೆ. ಇದು ಅವನ ವ್ಯಕ್ತಿತ್ವಕ್ಕೆ ಬರೆದ ವ್ಯಾಖ್ಯಾನವಾಗಿದೆ.

ಊರೆಲ್ಲ ನೆಂಟರು ಕೇರಿಯೆಲ್ಲವು ಬಳಗ
ಧಾರುಣಿಯು ಎಲ್ಲ ಕುಲದೈವವಾಗಿನ್ನು
ಯಾರನ್ನೂ ಬಿಡಲೋ ಸರ್ವಜ್ಞ

ಕನ್ನಡ ಸಂಸ್ಕೃತ ಸಂಬಂಧವನ್ನು ಕುರಿತು ಯಾರು ಈ ಅಭಿಪ್ರಾಯವನ್ನು ವ್ಯಕ್ತಿಪಡಿಸಿದಂತೆ ತೋರುವುದಿಲ್ಲ. ಇದು ವಿನೂತನವಾಗಿದೆ.

ತನ್ನ ಸಿರಿಯನು ತಾನು ಕನ್ನಡಿಯು ಕಾಬುದೆ?
ತನ್ನ ಸಿರಿಯರಿವುಸಕ್ಕದಕೆ, ಕನ್ನಡವು
ಕನ್ನಡಿಯ ತೆರನು ಸರ್ವಜ್ಞ

ಕನ್ನಡಿಯು ಇನ್ನೊಂದನ್ನು ಪ್ರತಿಬಿಂಬಿಸುತ್ತದೆ. ತನ್ನ ಸಿರಿಯನ್ನು ತಾನು ಕಾಣದು. ತನ್ನ ಸಿರಿಯನ್ನು ತಿಳಿಯುವ ಅಪೇಕ್ಷೆ ಸಂಸ್ಕೃತಕ್ಕೆ. ಕನ್ನಡವು ಕನ್ನಡಿಯ ತೆರದಿ ಸಂಸ್ಕೃತದ ಸಿರಿಯನ್ನು ಕನ್ನಡಿಸಿ ತೋರುತ್ತದೆ (?).

ಕಾಮ ಅಥವಾ sex ಎಷ್ಟು ದುರ್ದಮ್ಯ, ಸರ್ವಶಕ್ತ, ಸರ್ವವ್ಯಾಪಿ ಎಂಬ ವೈಜ್ಞಾನಿಕ. ಪ್ರಾಕೃತಿಕ (ನಿಸರ್ಗ) ಸತ್ಯವನ್ನು ಅಷ್ಟೆ ನಿರ್ಭಿಡೆಯಿಂದ ಉದ್ಘೋಷಿಸುತ್ತಾನೆ ಸರ್ವಜ್ಞ.

ಹರಿಯ ಉರವನು ಮೆಟ್ಟಿ ಹರನ ಶಿರವನು ಏರಿ
ಸರಸಿಜೋದ್ಭವನ ಮೊಗಗೆಡಿಸಿ ಮೀರಿದಳು
ಹಿರಿಯರಿನ್ನಾರು ಸರ್ವಜ್ಞ

ಉಚ್ಚೆಯ ಬಚ್ಚಲವ ತುಚ್ಛವೆಂದನಬೇಡಿ
ಅಚ್ಯುತಬಿದ್ದನಜಬಿದ್ದ ದೇವೇಂದ್ರ
ನೆಚ್ಚಿತ್ತು ಬಿದ್ದ ಸರ್ವಜ್ಞ

ಇವೆರಡು ವಚನಗಳು ಪ್ರಸಿದ್ಧವಾದುವು, ನಿತ್ಯಸತ್ಯವನ್ನು ಸಾರುವಂಥವು. ಎರಡನೆಯ ವಚನದಲ್ಲಿ ಹರನಿಗೆ ವಿನಾಯಿತಿ ಇದ್ದರೆ, ಮೊದಲ ವಚನದಲ್ಲಿ ಅವನನ್ನು ಸೇರಿಸಿಬಿಟ್ಟಿದ್ದಾನೆ. ಇದು ಅವನ ಆಲೋಚನಾ ಕ್ರಮವನ್ನು ತಿಳಿಸುತ್ತದೆ.

'ಹರ' ಅಥವಾ ಶಿವ ಅವನ ಆರಾಧ್ಯದೈವ. ಆದ್ದರಿಂದ ಅವ ಕಾಮವಶನಲ್ಲ ಎಂದಿದ್ದ. ಆನಂತರ 'ಪಕ್ಷ'ಕ್ಕಿಂತ ಸತ್ಯ ಹಿರಿದೆನಿಸಿರಬೇಕು.

ಇದರ ರೂಪಾಂತರವಾಗಿರುವ ವಚನವೊಂದು 'ತಗ್ಗಿನ ಕುಣಿಯೆಂದು' ಪ್ರಾರಂಭವಾಗುತ್ತದೆ. ಇದೇ ಆಲೋಚನಾ ಲಹರಿಯೇ ಅಲ್ಲೂ ಮುಂದುವರೆದಿದೆ.

ಯೋನಿಜರು ಯೋನಿಯನು ಹೀನ ಮಾಡುವುದೇನು?
ಆನಂದಜನನಕದು ಮೂಲ, ಶುಚಿಯಿರಲಿ
ತಾನೊಲಿವುದೆಂದ ಸರ್ವಜ್ಞ

ಇದೇ ಅಭಿಪ್ರಾಯವನ್ನು ಪರೋಕ್ಷವಾಗಿ ಹೆಚ್ಚು ಧ್ವನಿಪೂರ್ಣವಾಗಿ ಈ ಕೆಳಗಿನ ವಚನ ಒಳಗೊಂಡಿದೆ.

ಊರಿದ ಚೇಳಿನಿಂದೇರಿದ ಬೇನೆಯಲಿ
ಮೂರು ಜಗವೆಲ್ಲ ಹೊರಳುತಿಹುದು ನೋವ
ಮೀರಿದವರಿಲ್ಲ ಸರ್ವಜ್ಞ

**ಕಾಮವನ್ನು ಕುರಿತಾದ ಮುಕ್ತ ವಿಚಾರ, ವಿಶ್ಲೇಷಣೆ, ನಿರ್ಭೀತ ಎನ್ನಬಹುದಾದ ಉಲ್ಲೇಖಗಳನ್ನು ಯಾವ ದಾಕ್ಷಿಣ್ಯ, ಮುಚ್ಚುಮರೆ ಇಲ್ಲದೆ ಮಾಡಿದವನು ಸರ್ವಜ್ಞನೊಬ್ಬನೇ! ಆಧುನಿಕ ಮನೋವಿಜ್ಞಾನಿಗಳ ವಿಚಾರಧಾರೆಯನ್ನು ಸರಿಗಟ್ಟುವಂತಿದೆ ಇವನ ವಿಶ್ಲೇಷಣೆ. ಈ ಒಂದು ವಿಚಾರದಲ್ಲಿ ಅವನು ಅದ್ವಿತೀಯನೇ!**

"ಲಿಂಗವಿಲ್ಲದ ಪೂಜೆ, ಗಂಗೆಯಿಲ್ಲದ ತೋಟ" ಒಂದು "ಇಲ್ಲದ" ಶಬ್ದವನ್ನು ಪುನರಾವರ್ತಿಸುವ ಒಂದು ಮಾದರಿ pattern ಕಾಣುತ್ತದೆ. ಅವುಗಳನ್ನು ರಚಿಸಲು ವಿಶೇಷ ಪ್ರತಿಭೆಯಾಗಲೀ, ಚಿಂತನವಾಗಲೀ ಬೇಕಾಗಿಲ್ಲ. ಎಷ್ಟು ಉದ್ದಕ್ಕೂ, ಅಗಲಕ್ಕೂ ಎಳೆಯಬಹುದು. ಅವುಗಳಲ್ಲಿ ಅ–ಪೂರ್ವಕ್ಕೆ ಒಂದೆರಡು ಸಾರ್ಥಕ ಸೃಷ್ಟಿಗಳೂ ಮೂಡಬಹುದು. ಅಲ್ಲದೆ ಇಂಥ ರಚನೆಗಳು ಅವನ ಕವಿಶಿಷ್ಯರು ಅವನ ತಲೆಗೆ ಏರಿಸಿದ ಹೆಣಭಾರವೋ! ಯಾರು ಬಲ್ಲರು.

ರೊಕ್ಕವಿಲ್ಲದ ಬಾಳ್ವೆ ಮಕ್ಕಳಿಲ್ಲದ ಮನೆಯು
ಅಕ್ಕರವಿರದ ತವರೂರು ಇವು ಮೂರು
ದುಕ್ಕ ಕಾಣಯ್ಯ ಸರ್ವಜ್ಞ

ಎಂಬಂತೆ ನಡೆದೀತು, ಸಲ್ಲೀತು ಎಂಬ ರಚನೆಗಳೂ ಇವೆ. ಇವುಗಳಲ್ಲಿ ತರತಮಗಳಿವೆ. ರಚನೆಗಳು ಸೃಷ್ಟಿಯಾದಾಗ ಕಾವ್ಯ ಮೂಡುತ್ತದೆ. ಇಲ್ಲದಲ್ಲಿ ಅವು ಬರಿ ಕಗ್ಗ ಎನ್ನದೆ ವಿಧಿಯಿಲ್ಲ. ಪ್ರೀತಿಯ ಬಗ್ಗೆ ಇವನ ಈ ವಚನ ಗಮನ ಸೆಳೆಯುತ್ತದೆ.

ಮನಬಂದ ಹೆಣ್ಣನ್ನು ವಿನಯದಲಿ ಕರೆದಿತ್ತು
ಮನಮುಟ್ಟಿ ಬಾಳ್ವೆ ಮಾಡಿದರೆ ಅಮೃತದ
ಕೆನೆಯ ಸವಿದಂತೆ ಸರ್ವಜ್ಞ

ಇಲ್ಲಿ ಶಬ್ದಗಳ ಬಳಕೆಯಲ್ಲಿ ಎಚ್ಚರ, ಅವಧಾನ ಇದೆ. ಹೆಣ್ಣು ಎಂದರೆ ದಾನಕೊಡುವ ವಸ್ತು ಎಂದು ಭಾವಿಸಿದ, ಇಲ್ಲವೇ ಪಣವಾಗಿ ಇಡುವ, ಎಲ್ಲ ಗೆದ್ದುಕೊಂಡು, ಹೊತ್ತುಕೊಂಡು ಹೋಗುವ ಪದಾರ್ಥ ಎಂದು ಸಾಮಾನ್ಯವಾಗಿ ಭಾವಿಸಿದ ಪರಂಪರೆಯಲ್ಲಿ ಈ ಅಭಿಪ್ರಾಯ ತಂಗಾಳಿಯಂತಿದೆ (ಮಹಾಭಾರತದ ಭೀಷ್ಮನ ಸಾಹಸ ನೋಡಿ).

ಪ್ರೀತಿಸಿದ ಹೆಣ್ಣನ್ನು 'ವಿನಯದಲಿ ಕರೆತಂದು', 'ಮನಮುಟ್ಟಿ ಬಾಳ್ವೆ' – ಅತ್ಯಂತ ಉದಾತ್ತವಾಗಿದೆ. (ಬೇರೆಡೆ ಸರ್ವಜ್ಞನೇ ಹೆಣ್ಣನ್ನು 'ನಂಬಬಾರದು', 'ಮಾರಿ' ಎಂದು ಕರೆದಿರುವುದೂ ಉಂಟಲ್ಲ!). ಹೆಣ್ಣೆಂಬ ನಾಯಿ, ನಾಯಿಬಾಲ ಎಂದು ಸರಾಗವಾಗಿ ಹೇಳಲೂ ಬಲ್ಲ. ತುಂಬ ಬೆಲೆಯುಳ್ಳ ತೂಕದ ಮಾತನ್ನೂ ಆಡಬಲ್ಲ.

ನಾರಿ ಪರದುಪಕಾರಿ ನಾರಿ ಸ್ವರ್ಗಕ್ಕೆ ದಾರಿ
ನಾರಿ ಸಕಲರಿಗೆ ಹಿತಕಾರಿ ಮುನಿದರೆ
ನಾರಿಯೇ ಮಾರಿ ಸರ್ವಜ್ಞ

ಇದೇ ಪ್ರಸ್ತಾಪದಲ್ಲಿ ವೇಶ್ಯೆಯರ ಬಗ್ಗೆ ಅವರ ಗುಣದ ಬಗ್ಗೆ, ಅವರ ವರ್ತನೆಗಳ ಬಗ್ಗೆ ನೂರಾರು ವಚನಗಳಲ್ಲಿ ಪ್ರಸ್ತಾಪಿಸಿರುವ ಸರ್ವಜ್ಞ ಹೆಚ್ಚು ವೇಶ್ಯಾವಾಟಿಕೆಗಳಲ್ಲೇ ಅಲೆದಾಡಿ ಬಿಟ್ಟನೋ ಎಂಬ ಸಂಶಯ ಬರುವಂತಿದೆ. ಗರತಿಗೆ ಸಮಸಂಖ್ಯೆಯಲ್ಲಿ ವೇಶ್ಯರೂ ಇದ್ದರೆ, ಎಂಬುದನ್ನು ಸಮಾಜಶಾಸ್ತ್ರಜ್ಞರು ಸಂಶೋಧಿಸಿ ತಿಳಿಸಬೇಕಾಗಿದೆ.

ಒಮ್ಮುಖ ಪ್ರಣಯ ಸಲ್ಲದೆಂಬ ಅವನ ಹೇಳಿಕೆ ಮಾನ್ಯವಾಗಿದೆ. ನೋಡಿ: ಈ ವಚನ ಭಾಗ "ಚಿತ್ತವಿಲ್ಲದ ಹೆಣ್ಣೆಗರ್ತಿ ಮಾಡುವನು ಎಗ್ಗ"

'ಹಿತಸಂಸಾರದ ಆದರ್ಶಚಿತ್ರಣ, ಅವನ ಪ್ರಸಿದ್ಧವಾದ ಬೆಚ್ಚನೆ ಮನೆಯಾಗಿ' ಎಂದು ಜನಪ್ರಿಯವೂ, ಪ್ರಚಲಿತವೂ ಆಗಿರುವ ವಚನದಲ್ಲಿ ಮೈದಾಳಿದೆ. ಇದರ ವಿಶ್ಲೇಷಣೆ, ಮೌಲ್ಯಮಾಪನ ಈ ನಿಬಂಧದ ಅನ್ಯತ್ರ ಬಂದಿದೆ. ಅವನ ಅನುಭವಾಮೃತದಲ್ಲಿ ಅನೇಕ ದೈನಂದಿನ ಸಂಕಟಗಳು, ಪ್ರತಿಕೂಲಗಳು, ಇಕ್ಕಟ್ಟುಗಳು, ಬಿಕ್ಕಟ್ಟುಗಳು ಪ್ರಸ್ತಾಪಿತವಾಗಿವೆ. ಉದಾ; 'ಸೋರುವ ಮನೆಯಿಂದ ದಾರಿಯ ಮರ ಲೇಸು' ಎನ್ನುತ್ತಾನೆ.

ಅತ್ಯಾಧುನಿಕ "ಯಂತ್ರತಂತ್ರ" ಮುಂದುವರಿದ ಯುಗದಲ್ಲೂ ಬಡವರ ಪಾಲಿಗೆ ಇದೇ ಗತಿ. "ಹೌದೌದು" ಎಂದು ದನಿಗೂಡಿಸುವಂತಿದೆ. ಹಾಗೆಯೇ ಚುಚ್ಚುವ ಕೆರದಿಂದ ಕಚ್ಚುವ ಶುನಿಲೇಸು.

ಮಾನವ ಜೀವನದಿ ಸಣ್ಣಪುಟ್ಟ ಸಂಗತಿಗಳನ್ನು, ಪ್ರಸಂಗಗಳನ್ನು ಸಹ ಅವನು ಅಲಕ್ಷಿಸಿಲ್ಲ ಅಥವಾ ಅವನ ಸೂಕ್ಷ್ಮ ಕಣ್ಣಿಗೆ, ಸಂವೇದನೆಗೆ ಸಿಗದ ಮಾನವ ವ್ಯಾಪಾರವೇ ಇಲ್ಲವೆಂದರೂ ಸರಿಯೇ. ಈ ಅರ್ಥದಲ್ಲಿ ಅವನು ಜನತಾ ಜನಾರ್ಧನ, ಜನವಾಣಿ, ನಾಡವೈದ್ಯ, ಸಮುದಾಯದ ನಿಧಿ, ಪ್ರತಿನಿಧಿ ಎನ್ನಬಹುದು.

ಹೊಟ್ಟೆಯ ಬಗ್ಗೆ ಅವನ ಚಿಂತನೆ ಅನೇಕ ಹೊಳಹುಗಳನ್ನು ಪಡೆದಿದೆ. ಹೊಟ್ಟೆ ಅಥವಾ ಅದಕ್ಕೆ ಬೇಕಾದ ಅನ್ನ ಎಂಥ ಪ್ರಧಾನ ಶಕ್ತಿ!

ಕನ್ನವನು ಕೊರಿಸುವುದು ಭಿನ್ನವನು ತರಿಸುವುದು
ಬನ್ನದ ಸೆರೆ ಒಯ್ಯುವುದು ಒಂದು ಹಿಡಿ
ಅನ್ನ ನೋಡೆಂದ ಸರ್ವಜ್ಞ

ಎಲ್ಲ ಆಸಕ್ತಿ, ರತಿ, ಭೋಗದ ಮೂಲದಲ್ಲಿ ಒಡಲಿಗಿಷ್ಟಂಬಲಿಯು ಬೇಕು ಸರ್ವಜ್ಞ.

ನೇತ್ರಗಳು ಕಾಣಿಸವು ಶ್ರೋತ್ರಗಳು ಕೇಳಿಸವು
ಗಾತ್ರಗಳು ನಡೆಯವು ಕೂಳೊಂದು
ರಾತ್ರಿ ತಪ್ಪಿದರೆ ಸರ್ವಜ್ಞ (ಕೂಳು ಶಬ್ದಕ್ಕೆ 'ಅನ್ನ' ಎಂತಲೇ ಅರ್ಥ).

ಅಡಿಗಳದ್ದೇಳವವು ನುಡಿಗಳುರೆ ಕೇಳಿಸವು
ಮಡದಿಯರ ಮಾತು ಸೊಗಸವು ಕೂಳು ತಾ
ತಡೆದರಗಳಿಗೆ ಸರ್ವಜ್ಞ

ಇದು ಲೋಕಸತ್ಯ, ಅನುಭವ ಸತ್ಯ, ಸಾರ್ವಕಾಲಿಕ ಸತ್ಯ.

"ಅನ್ನದೇವರ ಮುಂದೆ ಇನ್ನು ದೇವರು ಉಂಟೆ?" ಎಂಬ ಪ್ರಶ್ನೆಗೆ ಅಲ್ಲೇ ಉತ್ತರವೂ ಅಡಗಿದೆ. ಜಗತ್ತಿನ ಅರ್ಧ ಪಾಲು ಜನರು ಹಸಿವಿನಿಂದ ಕಂಗಾಲಾಗಿದ್ದಾರೆ. ಆಧುನಿಕ ಕವಿ ದ.ರಾ.ಬೇಂದ್ರೆ ಎಲ್ಲ ದೇವರೂ ಬಂದರು, ಅನ್ನ ದೇವರು ಇನ್ನೂ ಬರಲಿಲ್ಲ, ಬರಲಿಲ್ಲ" ಎಂದು ಸರ್ವಜ್ಞನೊಡನೆ ಸಹಮತ ವ್ಯಕ್ತಪಡಿಸಿರುವುದು ಆ ಸಮಸ್ಯೆಯ ವಿಶ್ವರೂಪ ದರ್ಶನವಾಗಿದೆ.

ಸರ್ವಜ್ಞನು ವಚನಕಾರರಂತೆ ವಿಚಾರವಾದಿ, ಅನುಭಾವಿ, ಸಮಾಜ ವಿಮರ್ಶಕ ಮತ್ತು ಕ್ರಾಂತಿಕಾರಕ ನಡೆನುಡಿಗಳ ಸಾಮರಸ್ಯವನ್ನು ಸಾರಿದವನು.[?]

ವಚನಕಾರರಿಗಿಂತಲೂ ಇವನಲ್ಲಿ ಮಿಗಿಲಾದ ಕೆಲವು ಗುಣಗಳಿವೆ, ಉದಾರವಾದ ಭಾವಗಳಿವೆ. ವಚನಕಾರರಲ್ಲಿರುವ ಭವಿ-ಭಕ್ತ ಭೇದವೂ, ಅನ್ಯಮತ ತಿರಸ್ಕಾರವೂ ಇವನಲ್ಲಿಲ್ಲ. ಸರ್ವಜ್ಞನು

ಲೋಕಾನುಭವದಲ್ಲಿ ವಚನಕಾರರಿಗಿಂತಲೂ ಶ್ರೇಷ್ಠನಾಗಿದ್ದಾನೆ. ಅವರಿಗಿಂತಲೂ ಇವನಲ್ಲಿ ರಸಿಕತೆ, ವಿಶಾಲತೆ, ಉದಾರತೆಗಳು ಬಹಳವಾಗಿವೆ. ಬಹುಶ್ರುತತ್ವದಲ್ಲಿ ಇವನು ಯಾವ ವಚನಕಾರನಿಗೂ ಕಡಿಮೆಯಾದವನಲ್ಲ.

"ವಚನಶಾಸ್ತ್ರದಲ್ಲಿರುವುದಕ್ಕಿಂತಲೂ ಇವನ ಮಾತಿನಲ್ಲಿ ಜಾಣ್ಮೆಯೂ, ಮೋಹಕತೆಯೂ ಮಿಗಿಲಾಗಿವೆ. ಒಟ್ಟಿನಲ್ಲಿ ಸರ್ವಜ್ಞನು ವಚನಕಾರರಲ್ಲಿರುವ ಸದ್ಗುಣಗಳನ್ನೊಳಗೊಂಡು, ಅವರಲ್ಲಿಲ್ಲದಿರುವ ಕೆಲವು ಮಿಗಿಲಾದ ಗುಣಗಳನ್ನು ಪಡೆದು ರಸಭರಿತವೂ, ಅನ್ಯಾದೃಶ್ಯವೂ ಆದ ಕನ್ನಡ ವಚನಗಳಿಂದ, ತನ್ನದೇ ಆದ ಸುಶೈಲಿಯಿಂದ ಸಕಲ ಕನ್ನಡಿಗರನ್ನೂ ತನ್ನ ಮಾತಿನ ಮಂತ್ರದಿಂದ ವಶೀಕರಿಸಿದ್ದಾನೆಂದು ಹೇಳಬಹುದು" ಎಂದು ಆಸ್ಥಾನವಿದ್ವಾನ್, ಕೀರ್ತನ ಕೇಸರಿ ಬಿ.ಶಿವಮೂರ್ತಿಶಾಸ್ತ್ರಿಗಳು ಅತ್ಯುತ್ಸಾಹದಿಂದ ಪ್ರಶಂಶಿಸಿದ್ದಾರೆ.[೨] ಆದರೆ 'ಜಾಣ್ಮೆ ಮೋಹಕತೆ' ಸರಿಯೇ! ಪ್ರಾಮಾಣಿಕತೆ, ಅನುಭವದ ಪ್ರಾಮಾಣಿಕತೆ, ಸಾಂಗತ್ಯ(consistency)ವೂ ಅದಕ್ಕಿಂತಲೂ ಅಪೇಕ್ಷಣೀಯ ಗುಣಗಳಲ್ಲವೆ?

"ಅವನು (ಸರ್ವಜ್ಞನು) ಜನಗಳ ಮಧ್ಯೆ ಜನಗಳ ಜೊತೆ ಬೆರೆತು ಪರಕೀಯವಾಗಿ ಬದುಕಿದ ಜೀವನದ ಬಗ್ಗೆ ಅವನು ಮಾಡಿರುವ ವಿಮರ್ಶೆ ಅವನ ತ್ರಿಪದಿಗಳಲ್ಲಿ ಕಂಡುಬರುತ್ತದೆ. ಜೀವನವನ್ನು ಸಾಕ್ಷಿಯಾಗಿ ನೋಡಿ ವ್ಯಾಖ್ಯಾನಿಸುವ ಕನ್ನಡದ ಅತಿವಿರಳ ಚಿಂತಕನಾಗಿದ್ದಾನೆ ಅವನು"

"ಸರ್ವಜ್ಞನ ರಚನೆಗಳು ವಚನಕಾರರ ಆಲೋಚನೆಗಳ ಸಾರವೂ ಹೌದು, ವಿವರಣೆಯೂ ಹೌದು, ವಿಸ್ತರಣೆಯೂ ಹೌದು. ಒಟ್ಟರ್ಥದಲ್ಲಿ"[೩] ಎಂದು ಚಿದಾನಂದಮೂರ್ತಿ ಅಭಿಪ್ರಾಯಿಸಿದ್ದಾರೆ.

ಹಿರಿಯ ವಿದ್ವಾಂಸರ, ಸಂಶೋಧಕರ ಉದ್ಧರಣಗಳ ಸಾರವನ್ನು ನಾನು ನನ್ನ ನಿಬಂಧದ ರಚನೆಗಾಗಿ ಕೈಗೊಂಡ ಅಧ್ಯಯನದ ರಸಯಾತ್ರೆಯಲ್ಲಿ ಮನವರಿಕೆ ಮಾಡಿಕೊಂಡೆ ಎಂದು ವಿನಮ್ರನಾಗಿ ತಿಳಿಸಬಯಸುತ್ತೇನೆ.

**<u>ಅಡಿಟಿಪ್ಪಣಿಗಳು</u>**

೧. ಸರ್ವಜ್ಞ ಕವಿ – ಜೀವನ ಹಾಗೂ ಕಾವ್ಯ, ಡಾ. ಆರ್.ಸಿ.ಹಿರೇಮಠ, ಪುಟ ೩೬
೨. ಸರ್ವಜ್ಞ ಮೂರ್ತಿ – ಕವಿ ಕಾವ್ಯ ವಿಮರ್ಶೆ, ಬಿ.ಶಿವಮೂರ್ತಿ ಶಾಸ್ತ್ರಿಗಳು, ಪುಟ ೩೦
೩. ಸರ್ವಜ್ಞ ಒಂದು ಸಮೀಕ್ಷೆ, ಸಂಪಾದಕರು: ಡಾ॥ ಜಿ.ಎಸ್.ಶಿವರುದ್ರಪ್ಪ, ಬೆಂಗಳೂರು ವಿಶ್ವವಿದ್ಯಾನಿಲಯ, ೧೯೭೫, ಲೇಖನ : ಸರ್ವಜ್ಞ ಮತ್ತು ವಚನಕಾರರು, ಲೇಖಕ: ಡಾ.ಎಂ.ಚಿದಾನಂದಮೂರ್ತಿ, ಪುಟ ೧೪, ೧೫

## ಪರಾಮರ್ಶನ ಗ್ರಂಥಗಳು


೧) ಶ್ರೀ ಉತ್ತಂಗಿ ಚನ್ನಪ್ಪ ಅವರು ಸಂಪಾದಿಸಿರುವ ಸರ್ವಜ್ಞನ ವಚನಗಳು, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೨೦೦೪

೨) ಪರಮಾರ್ಥ (ಸರ್ವಜ್ಞನ ವಚನಗಳು), ಸಂಪಾದಕರು: ಡಾ।। ಎಲ್.ಬಸವರಾಜು, ಗೀತಾ ಬುಕ್ ಹೌಸ್, ಮೈಸೂರು, ೧೯೭೨

೩) ಸರ್ವಜ್ಞನ ವಚನಗಳು, ಸಂಪಾದಕರು: ಡಾ।। ಹೆಚ್.ತಿಪ್ಪೇರುದ್ರಸ್ವಾಮಿ, ೧೯೭೫

೪) ಸರ್ವಜ್ಞನ ವಚನಗಳು (ಒಂದು ಜಾನಪದೀಯ ಅಧ್ಯಯನ), ಡಾ।। ರಾಜಶೇಖರ ಜಮಖಂಡಿ, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್, ಮೈಸೂರು, ೨೦೦೪

೫) ಜಂಗಮ ಕವಿ ಸರ್ವಜ್ಞ (ವಿಚಾರ–ವಿಮರ್ಶೆ), ಡಾ।। ಬಿ.ಜಿ.ಚನ್ನೇಶ್ ಹೊನ್ನಾಳಿ, ಸಿಂಚನ ಗ್ರಂಥಮಾಲೆ, ಹಾವೇರಿ, ೨೦೦೮

೬) ಸರ್ವಜ್ಞ ವಚನಸಂಪದ, ಮಾಗಡಿ ರಂಗನರಸಿಂಹಯ್ಯ, ವಿಜಯವಾಹಿನಿ ಪಬ್ಲಿಕೇಷನ್ಸ್, ಶಿವಮೊಗ್ಗ, ೨೦೦೭

೭) ಸರ್ವಜ್ಞ, ಲೇಖಕಿ ಆರ್.ರೇಣುಕಮ್ಮ, ನಾಗರೇಖಾ ಪ್ರಕಾಶನ ಮಂದಿರ, ಬೆಂಗಳೂರು, ೧೯೬೪

೮) ಸರ್ವಜ್ಞನ ವಚನಗಳು, ಸಂಪಾದಕರು: ಡಾ।। ಎಲ್.ಬಸವರಾಜು, ಗೀತಾ ಬುಕ್ ಹೌಸ್, ಮೈಸೂರು, ೧೯೭೨

೯) ಸರ್ವಜ್ಞ ಕವಿ, ಎ.ಆರ್.ಕೃಷ್ಣಶಾಸ್ತ್ರಿ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಪ್ರಚಾರ ಪುಸ್ತಕ ಮಾಲೆ–೨೯, ೧೯೬೯

೧೦) ಹೆಣ್ಣು – ಸರ್ವಜ್ಞನ ದೃಷ್ಟಿಯಲ್ಲಿ, ಕೆ.ಆರ್.ಕೆ.ಮೂರ್ತಿ, ಜನಪದ ಪ್ರಕಾಶನ, ಬೆಂಗಳೂರು, ೨೦೦೬

೧೧) ಶ್ರೀ ಉತ್ತಂಗಿ ಚನ್ನಪ್ಪ ಅವರು ಸಂಪಾದಿಸಿರುವ ಸರ್ವಜ್ಞನ ವಚನಗಳು, ಪ್ರಕಾಶ ಸಾಹಿತ್ಯ, ಬೆಂಗಳೂರು, ೧೯೯೯

೧೨) ಸರ್ವಜ್ಞ ಒಂದು ಸಮೀಕ್ಷೆ, ಸಂಪಾದಕರು: ಡಾ।। ಜಿ.ಎಸ್.ಶಿವರುದ್ರಪ್ಪ, ಬೆಂಗಳೂರು ವಿಶ್ವವಿದ್ಯಾನಿಲಯ, ೧೯೭೫

೧೩) ಸರ್ವಜ್ಞನ ಜೀವನ ಕೃತಿಗಳು ಹಾಗೂ ಸಂದೇಶಗಳು, ಡಾ।। ಬಿ.ಕೆ.ಹೊಸಮಠ, ಶ್ರೀ ಜಗದ್ಗುರು ಅನ್ನದಾನೀಶ್ವರ ಸಂಸ್ಥಾನ ಮಠ, ಮುಂಡರಗಿ, ೧೯೮೩

೧೪) ಸರ್ವಜ್ಞನ ವಚನಗಳು, ಸಂಪಾದಕರು: ಪ್ರೊ. ರಾ.ಗೌ., ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೩

೧೫) ಸರ್ವಜ್ಞ ಕವಿ – ಜೀವನ ಹಾಗೂ ಕಾವ್ಯ, ಡಾ. ಆರ್.ಸಿ.ಹಿರೇಮಠ

೧೬) ಸರ್ವಜ್ಞ ಮೂರ್ತಿ – ಕವಿ ಕಾವ್ಯ ವಿಮರ್ಶೆ, ಬಿ.ಶಿವಮೂರ್ತಿ ಶಾಸ್ತ್ರಿಗಳು

೧೭) ಸಾಹಿತ್ಯಾವಲೋಕನ, ವಿ.ಸೀ.


## ಪರಾಮರ್ಶನ ಲೇಖನಗಳು


೧) ಜಂಗಮ ಕವಿ ಸರ್ವಜ್ಞ, ಪ್ರೊ.ರಾ.ಗೌ

೨) ಸರ್ವಜ್ಞನ ತ್ರಿಪದಿಗಳಲ್ಲಿ ಪ್ರತಿರೋಧ, ಡಾ।। ರಾಜಶೇಖರ ಜಮದಂಡಿ

೩) ಸರ್ವಜ್ಞನ ಸಂದೇಶ, ಸಿ.ಪಿ.ಕೆ

೪) ಚುಟುಕ ಕವಿ ಸರ್ವಜ್ಞ, ಎಚ್ಚೆಸ್ಕೆ

೫) ಸರ್ವಜ್ಞ, ವಿ.ಸೀ.